# ತಿರುಮಲೆ - ತಿರುವತಿ ದೇವಸ್ಥಾನಗಳು, ತಿರುಪತಿ.

# ತಿರುಮಲೆಯಲ್ಲಿ ಕಾಟೇಜು ನಿರ್ಮಾಣ-ದಾನಯೋಜನೆ

ಕಲಿಯುಗ ವೈಕುಂಠವೆಂದು ಕರೆಯಲ್ಪಡುವ ತಿರುಮಲೆ ಶ್ರೀ ವೆಂಕಟೇಶ್ವರ ಸ್ವಾಮಿಯ ನಿವಾಸಸ್ಥಳವಾಗಿದ್ದು ದಿನವೂ ಸಾವಿರಾರು ಮಂದಿ ಯಾತ್ರಿಕ ಭಕ್ತರು ಸ್ವಾಮಿಯ ಸಂದರ್ಶನಕ್ಕೆಂದು ಬಹುದೂರ ಪ್ರಾಂತಗಳಿಂದ ತಿರುಮಲೆಗೆ ಬರುತ್ತಾರೆ

ತಿ ತಿ ದೇ ಯಾತ್ರಿಕರ ಸ್ವಾಮಿ ಸೇವೆ, ಸಂದರ್ಶನ, ಅಶನ, ವಸತಿಗಳ, ಆರೋಗ್ಯ ಸಂರಕ್ಷಣೆಗಳಲ್ಲಿ ತನ್ನನ್ನು ತಾನು ಸಮರ್ಪಿಸಿಕೊಂಡು ಸೇವೆಸಲ್ಲಿಸುತ್ತಿದ್ದು ದಿನದಿನವೂ ಹೆಚ್ಚುತ್ತಿರುವ ಯಾತ್ರಿಕರ ಸಂದಣಿಗೆ ತಕ್ಕ ವಸತಿಸೌಕರ್ಯವನ್ನು ಒದಗಿಸಲು ಹಲವಾರು ರೀತಿಯ ಕಾಟೇಜು ನಿರ್ಮಾಣ ದಾನಯೋಜನೆಗಳನ್ನು ಕೈಗೆತ್ತಿಕೊಂಡಿದೆ ಈ ದಾನಯೋಜನೆಯ ವಿವರಗಳು ಹೀಗಿವೆ

1 **ಕಾಟೇಜುಗಳು :** ಗರುಡಾದ್ರಿ ನಗರದಲ್ಲಿ ಈಗಿರುವ ಕಾಟೇಜುಗಳ ಮೇಲಿನ ಅಂತಸ್ತಿನಲ್ಲಿ ಸಿ ಹಾಗೂ ಡಿ ಭಾಗಗಳ ಕಾಟೇಜು ನಿರ್ಮಾಣ ಇದಕ್ಕಾಗಿ ದಾನದ ಮೊತ್ತ ರೂ 2,25,000/-

ಪ್ರತಿ ಮೇಲಂತಸ್ತಿನ ಪ್ಲಿಂತ್ ಆವರಣ 82 ಚದರಮಿಾಟರ್ (883 ಚದರ ಅಡಿಗಳು) ಪ್ರತಿ ಕಾಟೇಜು ಎರಡು ಭಾಗವಿದ್ದು, ಪ್ರತಿ ಭಾಗದಲ್ಲಿಯೂ ಎರಡು ಮಲಗುಮನೆ (ಪ್ರತಿಯೊಂದೂ 4 3X3 02 ಮಿಾ) ಯೊಡನೆ ಜೊತಗೂಡಿದ ಸ್ನಾನದ ಮನೆ ಹಾಗೂ ಅಂಗಳ ಹೊಂದಿರುತ್ತದೆ

2 **ಅತಿಥಿ ಗೃಹ :** ಸಪ್ತಗಿರಿ ಸತ್ರಗಳು ಐದನೇ ಬ್ಲಾಕ್ - ಅಲಕನಂದ ಇಲ್ಲಿನ ಸುಸಜ್ಜಿತ ಕೋಣೆಗಳ ನಿರ್ಮಾಣಕ್ಕಾಗಿ ದಾನದ ಮೊತ್ತ ಒಂದು ಕೋಣೆಗೆ - ರೂ 1,50,000/-

ಈ ವಿಭಾಗಗಳು ತಿರುಮಲೆಯ ಫಿಲ್ಟರ್ ಹೌಸ್‌ನ ಬಳಿಯಲ್ಲಿದ್ದು, ಪ್ರತಿ ಕೋಣೆಯೂ 3 55X6 24 ಮಿಾ (11' 7' X 20' 6") ಆಗಿದ್ದು ಜೊತೆಗೂಡಿದ ಸ್ನಾನ ಹಾಗೂ ಅಲಂಕಾರದ ಕೋಣೆಗಳನ್ನು ಹೊಂದಿದೆ ಪ್ರತಿ ಕೋಣೆಯ ಹಾಸು 31 81 ಚದರ ಮಿಾಟರ್ ಆಗಿದ್ದು ನಿರ್ಮಾಣದಲ್ಲಿರುವ ಈ ಕೋಣೆಗಳ ವಾಸ ಸಿದ್ಧತೆಯ ಅಂದಾಜು ಕಾಲಾವಧಿ ಒಂದು ವರ್ಷವಾಗಿರುತ್ತದೆ

3 **ಸುರಪುರಂ ತೋಟದ ವಿಶೇಷ ರೀತಿಯ ಕಾಟೇಜುಗಳು :** ತಿರುಮಲೆಯ ಇಲ್ಲಿನ ಕಾಟೇಜುಗಳಿಗಾಗಿ ನೀಡಬೇಕಾದ ದಾನ ಪ್ರತಿ ಅಂತಸ್ತಿಗೆ ರೂ 5,00,000/-

ತಿರುಮಲೆಯ ಆಲಯದ ಈಶಾನ್ಯದಲ್ಲಿರುವ ಸುರಪುರಂತೋಟದ ಪ್ರಾಂತದಲ್ಲಿ ಮೂರು ಅಂತಸ್ತುಗಳ ಕಾಟೇಜುಗಳಿದ್ದು, ಪ್ರತಿ ಅಂತಸ್ತೂ 103 ಚದರ ಮಿಾಟರ್ (1110 ಚದರಡಿ) ವಿಸ್ತಾರವಾಗಿದೆ ಪ್ರತಿ ಅಂತಸ್ತಿನಲ್ಲೂ 3 66 X 4 27 ಮಿಾಟರ್ (12' X 14") ಅಳತೆಯ ಎರಡು ಮಲಗು ಮನೆಗಳಿದ್ದು, ಸ್ನಾನಗೃಹ, ಅಲಂಕಾರ ಕೋಣೆಗಳನ್ನು ಒಳಗೊಂಡಿವೆ ಪ್ರತಿ ಅಂತಸ್ತಿನಲ್ಲೂ ಹೊರ ಅಂಗಳವಿದೆ ಕಾರು ನಿಲ್ಲಿಸುವ ಸ್ಥಳವನ್ನೂ ಹೊಂದಿರುವ ಈ ಕಾಟೇಜುಗಳು ನಿರ್ಮಾಣದ ಹಂತದಲ್ಲಿದ್ದು ಪೂರ್ಣಗೊಳ್ಳುವ ಅವಧಿ ಒಂದು ವರ್ಷವಾಗಿದೆ

**ದಾನದ ರೀತಿ ನೀತಿ :** ದಾನಿಗಳು ಬಿಳಿಹಾಳೆಯ ಮೇಲೆ ಬರೆದು ತಮ್ಮ ಆಯ್ಕೆಯ ಕಾಟೇಜು ದಾನದ ಮೊತ್ತದ ಹಣಕ್ಕೆ ರಾಷ್ಟ್ರೀಕೃತ ಬ್ಯಾಂಕಿನ ಡಿ ಡಿ ಯನ್ನು ಕಾರ್ಯನಿರ್ವಹಣಾಧಿಕಾರಿ ತಿ ತಿ ದೇ ತಿರುಪತಿ 517 501 - ಇವರ ಹೆಸರಿನಲ್ಲಿ ಪಡೆದು ಕಳುಹಿಸಬಹುದು

ವ್ಯಕ್ತಿ, ಸಂಸ್ಥೆ, ಕುಟುಂಬ, ಕಂಪನಿ, ನಿಗಮ, ಮೊದಲು ಯಾರಾದರೂ ದಾನ ನೀಡಬಹುದು ಕಾಟೇಜುಗಳಿಗಾಗಿ ಧನ ದಾನ ನೀಡುವ ಈ ಅವಕಾಶ ಮೊದಲು ಬಂದವರಿಗೆ ಮೊದಲು ಸೂತ್ರದಲ್ಲಿ ಲಭ್ಯ

## ದಾನಿಗೆ ದೊರೆಯುವ ಸೌಲಭ್ಯಗಳು :

ದಾನಿಯು ವರ್ಷದಲ್ಲಿ 60 ದಿನಗಳ ಕಾಲ ಒಮ್ಮೆ ಹತ್ತು ದಿನಗಳಿಗೆ ಮಿಾರದಂತೆ ತಮ್ಮ ದಾನದ ಕಾಟೇಜಿನಲ್ಲಿ ಉಳಿಯಬಹುದು (ನಾಮ ಮಾತ್ರ ಸೇವಾ ಶುಲ್ಕದೊಡನೆ) ಈ ಸೌಲಭ್ಯವು ವ್ಯಕ್ತಿಗಳಿಗಾದರೆ ಅವರ ಜೀವನ ಪರ್ಯಂತ, ಅವರ ಪತ್ನಿ ಹಾಗೂ ನಂತರದ ವಾರಸುದಾರರಿಗೆ ಅನ್ವಯ ಕಂಪೆನಿಗಳು, ನಿಗಮ, ಸಂಸ್ಥೆಗಳ ವಿಷಯದಲ್ಲಿ 20 ವರ್ಷಗಳಿಗೆ ಸೀಮಿತ

ದಾನಿಗಳ ಹೆಸರು, ಅವರು ನೆನಪಿನಲ್ಲಿರಿಸಬೇಕಾದವರೊಬ್ಬರ ಹೆಸರಿನ ಶಿಲಾಫಲಕವನ್ನು ದಾನದ ಕಾಟೇಜಿನ ಮುಂಭಾಗದಲ್ಲಿ ಗೋಡೆ ಯಲ್ಲಿಟ್ಟು ಪ್ರದರ್ಶಿಸಲಾಗುವುದು

ಈ ಕಾಟೇಜುಗಳ ನಿರ್ಮಾಣಕ್ಕಾಗಿ ಮಾಡುವ ಹಣದ ದಾನಗಳು ಯಾವುದೇ ರೀತಿಯ ಆದಾಯ ತೆರಿಗೆಯ ವಿನಾಯತಿಯನ್ನೂ ಹೊಂದಿರದು

ಕೂಡಲೇ ಬರೆಯಿರಿ

**ಕಾರ್ಯನಿರ್ವಹಣಾಧಿಕಾರಿ**

**ತಿ. ತಿ. ದೇ.**



ಭೂಷಣಕೆ ಭೂಷಣ ಐದು ಭೂಷಣ
ಶೇಷಗಿರಿವಾಸ ಶ್ರೀವರ ವೆಂಕಟೇಶ

ನಾಲಿಗ್ಗೆ ಭೂಷಣ ನಾರಾಯಣ ನಾಮ
ಕಾಲಿಗೆ ಭೂಷಣ ಹರಿಯಾತ್ರೆಯು
ಆಲಯಕೆ ಭೂಷಣ ತುಲಸಿ ವೃಂದಾವನ
ವಿಶಾಲ ಕರ್ಣಕೆ ಭೂಷಣ ವಿಷ್ಣುಕಥೆಯು

ದಾನವೆ ಭೂಷಣ ಇರುವ ಹಸ್ತಂಗಳಿಗೆ
ಮಾನವೆ ಭೂಷಣ ಮಾನವರಿಗೆ
ಜ್ಞಾನವೆ ಭೂಷಣ ಮುನಿಯೋಗಿವರರಿಗೆ
ಮಾನಿನಿಗೆ ಭೂಷಣ ಪತಿಭಕ್ತಿಯು

ರಂಗನನು ನೋಡುವುದೆ ಕಂಗಳಿಗೆ ಭೂಷಣ
ಮಂಗಳಾಂಗಗೆ ಮಣಿದ ಶಿರ ಭೂಷಣ
ಶೃಂಗಾರ ತುಲಸಿ ಮಣಿ ಕೊರಳಿಗೆ ಭೂಷಣ
ರಂಗವಿಠಲ ನಿಮ್ಮನಾಮ ಅತಿ ಭೂಷಣ

- ಶ್ರೀಪಾದರಾಜರು.

ಸಂದರ್ಶಿಸಿ. ಆನಂದಿಸಿ.

## ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ, ತಿರುಚಾನೂರು.

# ವಾರ್ಷಿಕ ತೆಪ್ಪೋತ್ಸವಗಳು

### 24-6-99 ರಿಂದ 28-6-99 ವರೆಗೆ

| | | |
|---|---|---|
| 24-6-99 | ಗುರುವಾರ | ಶ್ರೀಕೃಷ್ಣಸ್ವಾಮಿಯವರಿಗೆ |
| 25-6-99 | ಶುಕ್ರವಾರ | ಶ್ರೀ ಸುಂದರರಾಜಸ್ವಾಮಿಯವರಿಗೆ |
| 26-6-99 | ಶನಿವಾರ | ಶ್ರೀ ಪದ್ಮಾವತೀ ಅಮ್ಮನವರಿಗೆ. |
| 27-6-99 | ಭಾನುವಾರ | ಶ್ರೀ ಪದ್ಮಾವತೀ ಅಮ್ಮನವರಿಗೆ |
| 28-6-99 | ಸೋಮವಾರ | ಶ್ರೀ ಪದ್ಮಾವತೀ ಅಮ್ಮನವರಿಗೆ |

ಜೇಷ್ಠ ಮಾಸದ ಪೂರ್ಣಿಮೆಯ ಆಚೀಚಿನ ದಿನಗಳಲ್ಲಿ ತಿರುಚಾನೂರು ಆಲಯದ ಶ್ರೀ ಪದ್ಮಸರೋವರದಲ್ಲಿ ನಡೆಯುವ ಅಮ್ಮನವರ ತೆಪ್ಪೋತ್ಸವಗಳು ತಳಿರುತೋರಣಗಳಿಂದ ವೇದಮಂತ್ರಗಳಿಂದ ವಿದ್ಯುದ್ದೀಪಗಳಿಂದ, ಮಿಗಿಲಾಗಿ ಭಕ್ತ ಜನ ಸಂದೋಹದಿಂದ ಕೂಡಿ ಆಕರ್ಷಕವಾಗಿರುತ್ತದೆ

**ತಾವೂ ಬನ್ನಿ. ತಿ.ತಿ.ದೇ. ತಮ್ಮವರನ್ನೂ ಕರೆತನ್ನಿ.**

     

ಸಂದರ್ಶಿಸಿ. ಆನಂದಿಸಿ.

## ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ, ತಿರುಮಲೆ.

# ವಾರ್ಷಿಕ ಜ್ಯೇಷ್ಠಾಭಿಷೇಕ

### 25-6-99 ರಿಂದ 27-6-99 ವರೆಗೆ

| | | |
|---|---|---|
| 25-6-99 | ಶುಕ್ರವಾರ | ವಜ್ರಕವಚ ಸಮರ್ಪಣೆ |
| 26-6-99 | ಶನಿವಾರ | ಮುತ್ತಂಗಿ ಸಮರ್ಪಣೆ |
| 27-6-99 | ಭಾನುವಾರ | ಸುವರ್ಣಕವಚ ಸಮರ್ಪಣೆ. |

ಜೇಷ್ಠ ಮಾಸದ ಜ್ಯೇಷ್ಠಾನಕ್ಷತ್ರದ ಆಚೀಚಿನ ದಿನಗಳಲ್ಲಿ ನಡೆಯುವ ಈ ಜ್ಯೇಷ್ಠಾಭಿಷೇಕದಲ್ಲಿ ಗೃಹಸ್ಥರು ಆರ್ಜಿತ ಸೇವಾ ಶುಲ್ಕವನ್ನು (ರೂ 2000/- ನೀಡಿ ಆರ್ಜಿತ ಸೇವೆಯನ್ನಾಗಿಯೂ ಮಾಡಿಸಬಹುದು ವಿವರಗಳಿಗಾಗಿ ತಿ. ತಿ ದೇ ವಿಚಾರಣಾಕೇಂದ್ರದಲ್ಲಿ ವಿಚಾರಿಸಿ.

**ನೀವೂ ಬನ್ನಿ. ತಿ.ತಿ.ದೇ. ನಿಮ್ಮವರನ್ನೂ ಕರೆತನ್ನಿ.**




ವೇಂಕಟಾದ್ರಿ ಸಮಂ ಸ್ಥಾನಂ ಬ್ರಹ್ಮಾಂಡೇ ನಾಸ್ತಿ ಕಿಂಚನ
ವೇಂಕಟೇಶ ಸಮೋ ದೇವೋ ನ ಭೂತೋ ನ ಭವಿಷ್ಯತಿ

ಸಂಪುಟ 30 ಜೂನ್ 1999 ಸಂಚಿಕೆ-1



ಮುಖಚಿತ್ರ ಆನಂದ ನಿಲಯ ವಿಮಾನ.
ಹಿಂಬದಿಯಲ್ಲಿ ತಿರುಚಾನೂರು ತೆಪ್ಪೋತ್ಸವ.



ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ
ಎಲ್ಲ ತಿ ತಿ.ದೇ
ವಿಚಾರಣಾಕೇಂದ್ರಗಳಲ್ಲಿ
ದೊರೆಯುವುವು.

**ಬಿಡಿ ಪ್ರತಿ 4-00**
**ವಾರ್ಷಿಕ ಚಂದಾ 48-00**




ತನ್ನ ಸುತ್ತಲಿನ ಜಗತ್ತನ್ನು ಅರಿತುಕೊಳ್ಳಲೆತ್ನಿಸಿದ ಮನುಷ್ಯನಿಗೆ ಮಾತು ಬಂದಾಗಿನಿಂದ ಮಹತ್ತಿನ ಸುಳಿವು ಸೂಕ್ಷ್ಮಗಳ ಬಗ್ಗೆ ಆಲೋಚನೆಯಲ್ಲಿ ಖಚಿತತೆ ಮೂಡುತ್ತ ಬಂದು, ಅಣುರೇಣು ತೃಣ ಕಾಷ್ಠಗಳಲ್ಲಿ ಯಾವನೋ ಒಬ್ಬ ಇರುವನೆಂದೂ "ಜಗಕೆಲ್ಲ ಕಾರಣಂ ಪ್ರೇರಣಂ ಧಾರಣಂ ಭಗವಂತನೆಂದೊಂದದೇನೊ ಇಹುದಲ್ತೆ" ಎಂದು ತಿಳಿಯುವ ಹೊತ್ತಿಗೆ ಸಾಕಷ್ಟು ಜಿಜ್ಞಾಸೆ ನಡೆದಿರಬೇಕು 'ಇದ್ದಕಿದ್ದಂತಕಸ್ಮಾತ್ ಅಗ್ನಿ' ಕಿಡಿ ಸಿಡಿದರೂ ಸಹ ಅದರ ಹಿಂದೆ ದೀರ್ಘಕಾಲದ ತಪನ ಇದ್ದಿರಬೇಕೆಂಬುದು ಖಚಿತವೇ ಹೌದು ಹಾಗೆ ನೋಡಿದರೆ ಈ ಒಂದು ಶತ ಶತ ಪ್ರಯತ್ನಗಳ ಫಲವೇ ಒಟ್ಟು ತತ್ವಶಾಸ್ತ್ರದ ಒಳಗುಟ್ಟು ಎನ್ನಲು ಅಡ್ಡಿಯಿಲ್ಲ ಅವನನ್ನು 'ಪಾವನಾತ್ಮವೊ ಸಾಕ್ಷಿಯೋ ಪರಬ್ರಹ್ಮವೊ' ಎಂದು ಗುರುತಿಸಲು ಪ್ರಯತ್ನಿಸುತ್ತ ನಡೆದ ನಮ್ಮ ಹಿರಿಯರು ಬಿಟ್ಟು ಹೋದ ಸಾಹಿತ್ಯವನ್ನು ಪರಿಶೀಲಿಸುವಾಗ ಅವನು 'ವಾಚಾಮಗೋಚರ' ಎನ್ನುವುದರ ಅರ್ಥಛಾಯೆ ಮನಸಿಗೆ ಹೊಳೆದಂತಾಗಿ ಬ್ರಹ್ಮಪದಾರ್ಥವನ್ನು ಕೈಲಿ ಹಿಡಿದ ಅನುಭವದ ಭ್ರಮೆ ಆದೀತು

ಇದಕ್ಕಿಂತ ನೂರು ಅಡಿ ಸಾವಿರ ಅಡಿ ಎತ್ತರದ ಇದೇ ದಾರಿಯಲ್ಲಿನ ಇಂತಹದೇ ಒಂದು ಅನುಭಾವ - 'ನಮ್ಮ ನಡುವೆಯೂ ನಮ್ಮನ್ನೂ ಆವರಿಸಿಯೂ ಮತ್ತೆ ಯಾವನೋ ಒಬ್ಬ ಇರಬೇಕು' ಎಂಬುದು ಮಾನವ ಜನಾಂಗದ ಮೊದಲಾಳ್ವಾರರಿಗೆ ಅದನ್ನೇ ಅವರು ಹಾಡಿದರು 'ಎಡರ ಕಡಲಾದ ಸಂಸಾರ ಅಳಿಯಲಿ ಎಂದು ಸೊಡರಂತೆ ಚಕ್ರವನು ಹಿಡಿದವನ ಕಿನ್ನಡಿಗೆ ನುಡಿಮಾಲೆ ಯಿದನು ತೊಡಿಸಿದೆನು' (ಪೊಯ್ಗೈ ಆಳ್ವಾರ್) "ಭಾವವೇ ವರ್ತಿಯಾಗಿರಲು ದೆಳಗಿ ಹಚ್ಚಿದೆನರಿವ ಸೊಡರ" (ಭೂದತ್ತ್ ಆಳ್ವಾರ್) "ಕಡಲಬಣ್ಣದ ನನ್ನ ಹರಿಯ ಕಂಡೆನು" (ಪೇಯಾಳ್ವಾರ್) (ಮೂರು ಪಾಶುರಗಳ ಅನುವಾದ ಮಾಸ್ತಿಯವರದು) ಅವರ ದಿಸೆಯಲ್ಲಿಯೇ ಅವರು ನಡೆದ ಹಾದಿಯಲ್ಲಿ ನಡೆದು ಹಾಡಿದವರು ಮತ್ತೂ ಹಲವರು ಅವರು ಒಟ್ಟು ಹನ್ನೆರಡು ಮಂದಿಯೆಂದು ಪರಂಪರೆ ಯಿಂದ ಗುರುತಿಸಲಾಗಿದೆ ಅವರು ಹಾಡಿದು ನಾಲ್ಕು ಸಾವಿರ ತಮಿಳಿನಲ್ಲಿ ನಾಲಾಯಿರ ಪಾಶುರಗಳೆಂದರು ಅವು ದಿವ್ಯ ಪ್ರಬಂಧಗಳು ತಮಿಳು ವೇದಗಳು ನಾಲ್ಕು ವೇದಗಳ ಸಾರ ಸರ್ವಸ್ವವೂ ನಾಲಾಯಿರದಲ್ಲಿದೆಯೆಂದೇ ಅವು ಗಳು ದಿನವೂ ಅನುಸಂಧಾನಕ್ಕೆ ಅರ್ಹವಾದವು ಎಂಬುದನ್ನು ಮನಗಾಣಬೇಕು ಅಲ್ಲಿ ನೂರೆಂಟು ದಿವ್ಯದೇಶಗಳೂ ವಿವರಿತವಾದವು, ಭಗವದ್ವಿಷಯವಾಗಿ ಪ್ರಖ್ಯಾತಿಯಾಯಿತು

ಆದರೆ ಇಷ್ಟೂ ಸಾಹಿತ್ಯ - ಇಹಸಂಕಟ ಪರಿಮಾರ್ಜನೆಯ ಸಾಹಿತ್ಯ - ನಮಗೆ ದೊರಕಿದ್ದರಲ್ಲಿ ಮತ್ತೊಬ್ಬ ಮಹನೀಯರನ್ನೂ ಸ್ಮರಿಸಲೇಬೇಕು ಅವರೇ ನಾಥಮುನಿಗಳು ನಾಲಾಯಿರ ದಿವ್ಯಪ್ರಬಂಧಗಳು ಲುಪ್ತವಾಗಿ ಕಾಲಗರ್ಭದಲ್ಲಿ ಕಳೆದುಹೋದ ಸಂದರ್ಭದಲ್ಲಿ, ನಾಥಮುನಿಗಳ ದಿನರಾತ್ರಿ ವ್ಯತ್ಯಾಸ ತಿಳಿಯದ ಪ್ರಯತ್ನ, ಏಕ ಮುಖವಾದ ಧನೋದ್ದೇಶಗಳ ನಿರಂತರ ಕೃಷಿಯಿಂದಾಗಿಯೇ ಅವುಗಳು ಪುನಃ ಪ್ರಕಾಶಗೊಂಡವು, ಅವರಿಗೆ ವಿಷ್ಣು ಪಾರಮ್ಯವನ್ನು ವಿವರಿಸುವ ಪಾಶುರಗಳ ಬಗ್ಗೆ ದಾಹ ಅವುಗಳನ್ನು ತಾವು ತಿಳಿಯಬೇಕೆಂಬ ಕಾತರ ವಿದ್ಯಾತುರಾಣಾಂ - ಎಂಬಂತೆ ಆಹಾರ ನಿದ್ರೆಗಳನ್ನೂ ವಿಶ್ರಾಂತಿ ಸುಖವನ್ನೂ ತೊರೆದು ಆಳ್ವಾರ್ ತಿರುನಗರಿಯತ್ತ ಹೊರಟರು ಮಧುರ ಕವಿ - ಆಳ್ವಾರರ ಪಾಶುರಗಳ ಮೂಲಕ ನಮ್ಮಾಳ್ವಾರರ - ಆ ಮೂಲಕ ಮತ್ತಿತರ ಆಳ್ವಾರರ ಪಾಶುರಗಳನ್ನೆಲ್ಲ ಸಂಗ್ರಹಿಸಿ ಸಂಪಾದಿಸಿ ಭಕ್ತ ಜನಕ್ಕೆ ನೀಡಿದರು. ಅಂತೆಯೇ ಅತಿ ದೊಡ್ಡ ಕಾಣಿಕೆಯನ್ನು ಜಗತ್ತಿಗೆ ನೀಡಿದ ಮಹಾನರಾದರು

ಅಂತಹ ಹಿರಿಯರನ್ನು ಸ್ಮರಿಸಿ ಆಳ್ವಾರ್ ಪಾಶುರಗಳ ಅನುಸಂಧಾನ ಮಾಡೋಣ

ಜ್ಯೇಷ್ಠೇ ಅನೂರಾಧಾ ಸಂಭೂತಂ ವೀರನಾರಾಯಣ ಪುರೇ
ಗಜವಕ್ತ್ರಾಂಶ ಮಾಚಾರ್ಯ ಮಾದ್ಯಂ ನಾಥಮುನಿಂ ಭಜೇ

# ಹರಿದ್ವಾರ - ಹೃಷೀಕೇಶ

- ಆದ್ಯರಾಮಾಚಾರ್ಯ.

ಸ್ವರ್ಗದ್ವಾರೇಣ ತತ್ ತುಲ್ಯಂ
ಗಂಗಾ ದ್ವಾರಂ ನ ಸಂಶಯಃ
ತತ್ರಾಭಿಷೇಕಂ ಕುರ್ವೀತ
ಕೋಟಿ ತೀರ್ಥೇ ಸಮಾಹಿತಃ
ಲಭತೇ ಪುಂಡರೀಕಂ ಚ
ಕುಲಂ ಚೈವ ಸಮುದ್ಧರೇತ್
ತತ್ರೈವ ರಾತ್ರಿ ವಾಸೇನ
ಗೋ ಸಹಸ್ರ ಫಲಂ ಲಭೇತ್

- ಪದ್ಮಪುರಾಣ-ಆದಿಖಂಡ,
- ಮಹಾಭಾರತ ವನಪರ್ವ

ನಗಾಧಿರಾಜನಾದ ಹಿಮಾಲಯದಲ್ಲಿ ಬದರೀ, ಕೇದಾರನಾಥ, ಮಾನಸ ಸರೋವರ, ಗಂಗೋತ್ರಿ, ಯಮುನೋತ್ರಿ ಮೊದಲಾದ ಸ್ಥಳಗಳನ್ನು ನೋಡಿಕೊಂಡು ಬರುವುದೆಂದರೆ, ಜೀವನದಲ್ಲಿ ಪರಮ ಸಾರ್ಥಕವೆಂದೆನಿಸಿಕೊಂಡಿದೆ ಪ್ರತಿಯೊಬ್ಬ ಭಾರತೀಯನಿಗೂ ಜೀವನದಲ್ಲಿ ಒಂದು ಸಲವಾದರೂ ಹಿಮಾಲಯದ ಯಾತ್ರೆ ಮಾಡಿಕೊಂಡು ಬರುವ ಹಂಬಲವಿರುತ್ತದೆ

ವಿಷ್ಣು ಪಾದೋದ್ಭವಿ ಎಂದೆನಿಸಿಕೊಂಡು ಶಂಕರನ ಜಟಾಜೂಟದಿಂದ ಧರೆಗೆ ಧುಮ್ಮಿಕ್ಕಿ ಬಂದ ಗಂಗೆಯೆಂದರೆ ಸಾಕು, ನಮ್ಮ ಮನವು ಪುಳಕಿತಗೊಳ್ಳುತ್ತದೆ ನಮ್ಮ ಪ್ರಾಚೀನರಂತೂ ತಾವು ಎಲ್ಲಿದ್ದರೂ ಸರಿ ನಿತ್ಯಸ್ನಾನಕ್ಕೆಂದು ಬಳಸುತ್ತಿದ್ದ ತಾಮ್ರದ ಪಾತ್ರೆಗೂ ಸಹ ಗಂಗಾಳವೆಂಬ ಹೆಸರನ್ನಿಟ್ಟು ಸ್ನಾನ ಕಾಲದಲ್ಲಿ ಅವಳನ್ನು ಸ್ಮರಿಸುತ್ತಿದ್ದರು ದಕ್ಷಿಣದ ಯಾತ್ರಿಕರಿಗೆ ಮೊಟ್ಟ ಮೊದಲು ಈ ತಾಯಿಯ ದರ್ಶನವಾಗುವುದು ಹರಿದ್ವಾರದಲ್ಲಿ ಅದನ್ನು ಸ್ವರ್ಗ ದ್ವಾರವೆಂದೂ, ಹರಿಯ ಪಾದ ಅಥವಾ ಹರೀಕಿ ಪಾಯರಿ ಎಂದೂ ಕರೆಯುವುದುಂಟು ಇಲ್ಲಿ ಸ್ನಾನ ಮಾಡುವುದರಿಂದ ಪುಂಡರೀಕ ಯಜ್ಞ ಮಾಡಿದರೆ ಯಾವ ಪುಣ್ಯ ಲಭಿಸುವುದೋ ಅಂಥ ಪುಣ್ಯ ಪ್ರಾಪ್ತಿಯಾಗುವುದೆಂದು ಪುರಾಣಗಳು ತಿಳಿಸುತ್ತವೆ ಈ ಪ್ರವಾಹದ ದಂಡೆಯಲ್ಲಿ ಯಾರು ಒಂದು ರಾತ್ರಿಯನ್ನು ಕಳೆಯುವರೋ ಅಂಥವರಿಗೆ ಸಾವಿರ ಗೋದಾನ ಮಾಡಿದ ಪುಣ್ಯಪ್ರಾಪ್ತಿ ಯಾಗುವುದೆಂದು ಹೇಳಲಾಗಿದೆ. ಗಂಗೆಯನ್ನು ಕುರಿತು ಇನ್ನೂ ಹೆಚ್ಚಿನ ಮಾಹಿತಿಯನ್ನಪೇಕ್ಷಿಸಿದಲ್ಲಿ ಅಂಥವರು ನಾರದ ಪುರಾಣವನ್ನು ಅಭ್ಯಾಸ ಮಾಡುವುದು ವಿಹಿತ

ದೇವದತ್ತನೆಂಬ ಬ್ರಾಹ್ಮಣನು ಈ ಪ್ರವಾಹದ ದಂಡೆಯಲ್ಲಿ ತಪಸ್ಸನ್ನಾಚರಿಸುತ್ತಿದ್ದ ಆತನು ವಿಷ್ಣು ಶಿವರಲ್ಲಿಯ ಭೇದಬುದ್ಧಿಯುಳ್ಳವನಾಗಿದ್ದ ಆತನ ಕಠೋರವಾದ ತಪಸ್ಸನ್ನು ಭಂಗಪಡಿಸಲು ದೇವಲೋಕದವರು "ಪ್ರಾಮ್‌ಲೋಚ" ಎಂಬ ಅಪ್ಸರೆಯನ್ನು ನಿಯುಕ್ತಿ ಮಾಡಿದರು ಪ್ರಥಮದಲ್ಲಿ ತನ್ನ ತಪೋಭಂಗವಾದರೂ ಆತನು ಪುನಃ ತಪವನ್ನಾರಂಭಿಸಿದ ಆಗ ಕೈಲಾಸಾಧಿಪತಿಯು ಪ್ರತ್ಯಕ್ಷನಾಗಿ ಇಬ್ಬರನ್ನೂ ಸಮಭಾವದಿಂದ ಆರಾಧಿಸಲು ತಿಳಿಸಿ ಹೇಳಿದ. ಹೃಷೀಕೇಶದ ಮಹಾತ್ಮವನ್ನು ಕುರಿತು ಈ ಕಥೆಯು ಸಿಗುತ್ತದೆ.

ಹರಿದ್ವಾರವನ್ನು, ಹರಿದ್ವಾರ, ಗಂಗಾದ್ವಾರ, ಕುಶಾವರ್ತ, ಮಾಯಾಪುರಿ, ಕನಖಲ, ಜ್ವಾಲಾಪುರಿ ಹಾಗೂ ಭೀಮಗೋಡಾ ಎಂಬ ಹೆಸರಿನಿಂದ ವಿಂಗಡಿಸಲಾಗಿದೆ ಭಾರತದ ಏಳು ಪುಣ್ಯಸ್ಥಳಗಳಲ್ಲಿ, ಹರಿದ್ವಾರವೂ ಒಂದೆನಿಸಿದೆ. ಇಲ್ಲಿ ಹನ್ನೆರಡು ವರುಷಗಳಿಗೊಮ್ಮೆ ಸೂರ್ಯ - ಚಂದ್ರರು ಮೇಷ ರಾಶಿಗೆ ಬಂದಾಗ ಕುಂಭಮೇಳವು ನಡೆಯುತ್ತದೆ. ಆ ಕಾಲದಲ್ಲಿ ಹಿಮವತ್ಪರ್ವತದಲ್ಲಿ ವಾಸಿಸುವ ಸಾಧು ಸಂತರು ಹಾಗೂ ಸಮಗ್ರ ಭಾರತದ ಸಾಧಕರು, ಗಂಗಾರಾಧಕರು ಬಂದು ಸೇರುತ್ತಾರೆ ಆರು ವರುಷಕ್ಕೊಮ್ಮೆ ನಡೆಯುವ ಮೇಳವನ್ನು ಅರ್ಧ ಕುಂಭ ಮೇಳವೆಂದು ಕರೆಯುತ್ತಾರೆ ಸ್ಫಟಿಕದಂತೆ ಹರಿಯುವ ಗಂಗೆಯಲ್ಲಿ ಕೈಯಿಟ್ಟರೆ ಸಾಕು ಮೈಮನಗಳಲ್ಲಿ ಶ್ರದ್ಧೆಯ ಮಿಂಚು ಹರಿದಂತೆ ಭಾಸವಾಗುತ್ತದೆ ಈ ತಾಯಿಯನ್ನು ಧರೆಗಿಳಿಸಲು ನಡೆದ ಪ್ರಯತ್ನವನ್ನು ಭಗೀರಥ ಯತ್ನವೆಂದು ಕರೆಯುತ್ತಾರೆ. ಆದುದರಿಂದ ಇವಳು ನಮ್ಮ ಪಾಲಿನ ಭಾಗೀರಥಿಯಾಗಿದ್ದಾಳೆ ದ್ವಾಪರದಲ್ಲಿ ಶ್ರೀಕೃಷ್ಣನು ತನ್ನ ಅಂತರಂ



ಗದ ಭಕ್ತನೆಂದೆನಿಸಿಕೊಂಡಿದ್ದ ವಿದುರನಿಗೆ ಕೊನೆಗಾಲದಲ್ಲಿ "ನೀನು ಹರಿದ್ವಾರಕ್ಕೆ ಹೋಗು ಅಲ್ಲಿ ಮೈತ್ರೇಯಾಚಾರ್ಯರು ಸಿಗುತ್ತಾರೆ ಅವರಿಂದ ಉಪದೇಶವನ್ನು ಪಡೆದುಕೋ" ಎಂದು ಹೇಳಿದ ಮಾತುಗಳ, ಶ್ರೀಮದ್ಭಾಗವತದಲ್ಲಿ ಕಾಣಸಿಗುವ ಪ್ರಸಂಗವನ್ನೋದುತ್ತಿದ್ದಂತೆ ಭಾವುಕರ ಮನಸ್ಸು ಗಂಗೆಯಲ್ಲಿ ಲೀನವಾದಂತೆ ಭಾಸವಾಗುತ್ತದೆ.

ಹರಿದ್ವಾರೇ ಕುಶಾವರ್ತೆ
ಬಿಲ್ವಕೇ ನೀಲ ಪರ್ವತೇ
ಸ್ನಾತ್ವಾ ಕನಖಲೇ ತೀರ್ಥೇ
ಪುನರ್ಜನ್ಮನವಿದ್ಯತೆ

ಇಲ್ಲಿ ಹರಿವ ಪ್ರವಾಹದ ಗುಂಟ ಹರಿಕಿ ಪಾಯರಿ, ಕುಶಾವರ್ತ, ಬಿಲ್ವಕೇಶ್ವರ, ನೀಲಪರ್ವತ, ಕನಖಲ ಮೊದಲಾದ ಸ್ಥಳಗಳಲ್ಲಿ ಮಿಂದು, ಆ ದಂಡೆಯಲ್ಲಿರುವ ದೇವತೆಗಳ ದರ್ಶನ ಮಾಡುವುದರಿಂದ ಪುನರ್ಜನ್ಮವು ಲಭಿಸದು ಎಂದು ಹೇಳಿದ್ದಾರೆ

ದೇವಲೋಕದಲ್ಲಿದ್ದ ಈ ತಾಯಿಯನ್ನು ಧರೆಗಿಳಿಸಲು ಬ್ರಹ್ಮದೇವನನ್ನು ಕುರಿತು ದೀರ್ಘಕಾಲ ತಪಗೈದುದುಂಟು ಶ್ವೇತಕೇತು ರಾಜನಿಗೆ ಪ್ರಸನ್ನನಾದ ಬ್ರಹ್ಮದೇವನು ಬೇಕಾದ ವರವನ್ನು ಕೇಳು ಎಂದಾಗ, ಈ ಸ್ಥಳವು ನಿಮ್ಮ ಹೆಸರಿನಿಂದ ಪ್ರಸಿದ್ಧಿ ಹೊಂದಬೇಕು ಎಂದು ಕೇಳಿಕೊಂಡ ಕಾರಣ ಇದನ್ನು ಬ್ರಹ್ಮಘಟ್ಟ ಎಂದು ಕರೆಯುವುದೂ ಉಂಟು ಸತ್ಯಲೋಕಾಧಿಪತಿಯು ಭಗವಾನ್ ವಿಷ್ಣುವಿನೊಂದಿಗೆ ಈ ಕ್ಷೇತ್ರದಲ್ಲಿ ಸದಾ ಸನ್ನಿಹಿತರಾಗಿರುತ್ತಾರೆಂಬ ನಂಬಿಕೆ ಇದೆ. ರಾಜಾ ವಿಕ್ರಮಾದಿತ್ಯನ ಸೋದರ ಭರ್ತೃಹರಿಯು ತನ್ನ ಸೋದರನ ಸ್ಮರಣಾರ್ಥವಾಗಿ ಪ್ರವಾಹದ ಗುಂಟ ಸ್ನಾನಘಟ್ಟವನ್ನು ಕಟ್ಟಿಸಿದನೆಂದು ಹೇಳುತ್ತಾರೆ ಅದನ್ನೇ ಹರೀಕಿ ಪಾಯರಿ ಎಂದೆನ್ನುತ್ತಾರೆ ಇಲ್ಲಿ ಗಂಗಾ ಮಾತೆ ಎರಡು ಭಾಗವಾಗಿ ಹರಿಯುತ್ತಾಳೆ ದಂಡೆಯ ಮೇಲೆ ವಿಷ್ಣು ಪಾದುಕಾ, ಮಾನಸಾ ದೇವಿ, ಸಾಕ್ಷೇಶ್ವರ, ಗಂಗಾಧರ - ಮೊದಲಾದವರ ದೇವಮಂದಿರಗಳಿವೆ ಹರೀಕಿ ಪಾಯರಿಯಲ್ಲಿ ಸ್ನಾನ ಮಾಡಿದ ನಂತರ ಕನಖಲದಲ್ಲಿ ಸ್ನಾನ ಮಾಡುವುದು ವಿಶೇಷವೆನಿಸಿಕೊಂಡಿದೆ ಹರಿದ್ವಾರ ಹಾಗೂ ಹೃಷಿಕೇಶ ಈ ಎರಡೂ ಸ್ಥಳಗಳು ಋಷಿ ಮುನಿಗಳ ವಾಸಕ್ಕೂ ತಪಸ್ವಿಗಳ ಬಿಡಾರಕ್ಕೂ ಸಾಧಕರ ಚಿಂತನೆಗೂ ಅತ್ಯಂತ ಮಹತ್ವದ ಸ್ಥಾನಗಳೆನಿಸಿಕೊಂಡಿವೆ

ಲಕ್ಷ್ಮಣ ಝೂಲಾ ಎಂಬ ಸೇತುವೆಯ ಆಚೆಯ ದಂಡೆಯಲ್ಲಿ ಸ್ವರ್ಗಾಶ್ರಮ, ಪರಮಾರ್ಥ ನಿಕೇತನ, ಗೀತಾಶ್ರಮ, ಕಾಲೀಕಂಬಲೀವಾಲಾ ಆಶ್ರಮ, ಶಿವಾನಂದಾಶ್ರಮ ಹೀಗೆ ಒಂದಲ್ಲ, ಎರಡಲ್ಲ ನೂರಾರು ಆಶ್ರಮಗಳಿವೆ ಪ್ರತಿ ವರುಷ ತಪ್ಪದೇ ಈ ಲೇಖಕನು ಗೀತಾಶ್ರಮದಲ್ಲಿ ಹದಿನೈದು ದಿನಗಳ ಸ್ನಾದರೂ ಇದ್ದು, ಸತ್ಸಂಗದಲ್ಲಿ ಭಾಗವಹಿಸಿ ಮನಶ್ಶಾಂತಿ ಪಡೆದು ಬರುವುದನ್ನು ರೂಢಿಸಿಕೊಂಡಿರುವುದು ಆ ತಾಯಿಯ ಅನುಗ್ರಹವೆನಿಸಿದೆ

ಹರಿದ್ವಾರದಲ್ಲಿ ಪ್ರತಿಯೊಂದು ಪ್ರಾಂತದವರಿಂದ ಹಾಗೂ ಧನಿಕರಿಂದ ನಿರ್ಮಾಣಗೊಂಡ ನೂರಾರು ಧರ್ಮಶಾಲೆಗಳಿವೆ ಕರ್ನಾಟಕ ಧರ್ಮಶಾಲೆ, ಆಂಧ್ರದ ಧರ್ಮಶಾಲೆ, ಟಿ ಟಿ ಡಿ ಯವರು ನಿರ್ಮಿಸಿದ ಧರ್ಮಶಾಲೆ - ಇವು ಹೃಷೀಕೇಶದಲ್ಲಿದೆ ದಕ್ಷಿಣದ ಯಾತ್ರಿಕರು ಇಲ್ಲಿ ಬಿಡಾರ ಮಾಡುತ್ತಾರೆ ಬದರೀ, ಕೇದಾರನಾಥ, ಗಂಗೋತ್ರಿ ಯಮುನೋತ್ರಿ ಮೊದಲಾದ ಭಾಗಗಳಿಗೆಲ್ಲ ಹೃಷೀಕೇಶದಿಂದಲೇ ಬಸ್ಸಿನಲ್ಲಿಯೋ ಅಥವಾ ಕಾರುಗಳಲ್ಲಿಯೋ ಪ್ರಯಾಣ ಮಾಡಬೇಕಾಗುತ್ತದೆ ಉತ್ತರ ಪ್ರದೇಶ ಸರ್ಕಾರದವರೂ ಸಹ ಯಾತ್ರಾರ್ಥಿಗಳ ಅನುಕೂಲಕ್ಕಾಗಿ ಬಸ್ಸಿನ ಏರ್ಪಾಟನ್ನು ಮಾಡಿರುತ್ತಾರೆ

ಹೃಷೀಕೇಶ ಹಾಗೂ ಹರಿದ್ವಾರ ಈ ಎರಡೂ ಸ್ಥಳಗಳಲ್ಲಿ ರೈಲ್ವೆ ನಿಲ್ದಾಣಗಳಿವೆ ಹರಿದ್ವಾರದಿಂದ ದ್ರೋಣಾಚಾರ್ಯರ ರಾಜ್ಯವೆನಿಸಿದ ಸ್ಥಳವನ್ನು ಡೆಹರಾಡೂನ್ ಎಂದು ಕರೆಯುತ್ತಾರೆ ಅಲ್ಲಿಗ್ಗೂ ಹೋಗಿ ಬರಬಹುದಾಗಿದೆ ದಕ್ಷಿಣದ ಕನ್ಯಾಕುಮಾರಿಯಿಂದ ಪೂರ್ವ ಪಶ್ಚಿಮ ಭಾಗವೆನಿಸಿದ ಕಲಕತ್ತಾ, ಸೋಮನಾಥ, ಪಂಜಾಬ ಮೊದಲಾದ ಎಲ್ಲ ಭಾಗಗಳಿಂದಲೂ ಹರಿದ್ವಾರಕ್ಕೆ ಬಂದು ಹೋಗಲು ರೈಲ್ವೆ ಸೌಕರ್ಯವಿದೆ ಇಲ್ಲಿಯ ರಾಜಮಾರ್ಗಗಳು ಚೆನ್ನಾಗಿವೆ ಬಸ್ಸು ಅಥವಾ ಕಾರಿನಿಂದಲೂ ಸಹ ಈ ಕ್ಷೇತ್ರಗಳಿಗೆ ಬಂದು ಹೋಗಬಹುದಾಗಿದೆ

ನಿಸರ್ಗ ರಮಣೀಯವಾದ ಉತ್ತುಂಗ ಪರ್ವತಗಳ ಮೇಲೆ ಹರಡಿದ ಬಂಗಾರದಂತೆ ಥಳ ಥಳಿಸಹೊಳೆವ ಗಿರಿಶಿಖರಗಳನ್ನು ನೋಡುತ್ತಾ, ಶ್ರೀಹರಿಯ ಧ್ಯಾನ ಮಾಡುತ್ತಾ ಗಂಗಾ ನದಿಯಲ್ಲಿ ಒಂದು ಮುಳುಗು ಹಾಕಿದರೆ ಸಾಕು, ಆತನ ಹೃದಯದಲ್ಲಿ ಸಂಜೀವಿನಿಯ ಮಿಂಚು ಹರಿದಂತಾಗುತ್ತದೆ ನವಯೌವನ ಭರಿತನಾದ ತರುಣನೆಂಬ ಭಾವನೆಯು ಮೂಡಿಬರುತ್ತದೆ ತಪ್ಪದೆ ಭಾವಿಕರು ಈ ಯಾತ್ರೆಯನ್ನು ಆರಂಭಿಸಲಿ ಎಂಬುದೇ ಪ್ರಾರ್ಥನೆ





# ತಿರುಮಾಲೈ

- ಎಂ. ಆರ್. ನರಸಿಂಹನ್.

ತೊಂಡರಡಿಪ್ಪೊಡಿ ಆಳ್ವಾರರ ತಿರುಮಾಲೈ ದಿವ್ಯ ಪ್ರಬಂಧವು ತಿರುಕುರುಂದಾಂಡಗಂ ಪ್ರಬಂಧದಂತೆಯೇ ಛಂದೋ ನಿಬದ್ಧವಾಗಿ ಅದೇರೀತಿಯ ವಿಚಾರಧಾರೆಯಿಂದ ಕೂಡಿದೆ. ಎರಡರಲ್ಲೂ ಪರಮಾತ್ಮನ ಸ್ವರೂಪರೂಪ ಗುಣವಿಭವೈಶ್ವರ್ಯಾದಿಗಳು ವರ್ಣಿತವಾಗಿವೆ. ಎರಡರಲ್ಲೂ ಆತನ ಶರಣಾಗತಿಯೇ ಜೀವರಗುರಿ ಎಂದು ಪ್ರತಿಪಾದಿತವಾಗಿದೆ. ಆದರೆ ತಿರುಕ್ಕುರುಂಧಾಂಡಗಮ್ ೨೦ ಪಾಶುರಗಳ ಹ್ರಸ್ವಕವಿತೆ ಎನ್ನದೇಕು. ತಿರುಮಾಲೈ ಅದರ ವಿಚಾರವನ್ನೇ ಉಪಬ್ರುಂಹಣಮಾಡಿ ಸೂತ್ರರೂಪಕ್ಕೆ ವ್ಯಾಖ್ಯಾನರೂಪವಾಗಿ ಹೇಳಲ್ಪಟ್ಟ ದಿವ್ಯಪ್ರಬಂಧವೆನ್ನಬಹುದು. ಇದರಲ್ಲಿ ನಲವತ್ತೈದು ಪಾಶುರಗಳಿವೆ.

ತಿರುಮಂಗೈ ಆಳ್ವಾರ್ ಅವರು ಓರ್ವ ಪರಮ ಭಕ್ತ ಕವಿಶೇಖರರು ಪರಮಾತ್ಮನ ವರ್ಣನೆಯಲ್ಲಿ ಅವರಿಗೆ ದಣಿವೇ ಏರ್ಪಡದು ಹೀಗಾಗಿ ಅವರ ದಿವ್ಯ ಪ್ರಬಂಧದಲ್ಲಿ ಪರಮಾತ್ಮನ ಗುಣವೈಭವದ ವರ್ಣನೆಗೆ ಹೆಚ್ಚು ಪಾಶುರಗಳು ಮೀಸಲು ಅವರು ಮೇಲಾಗಿ ಶ್ರೀ ವೈಷ್ಣವರ ನೂರೆಂಟು ದಿವ್ಯಕ್ಷೇತ್ರಗಳಲ್ಲಿನ ದೇವರುಗಳನ್ನು ದರ್ಶಿಸಿ ಬಂದವರು ಆದರಿಂದ ಅವರಿಗೆ ಒಂದು ದಿವ್ಯದೇಶದಲ್ಲಿ ದೈವದ ಶನ ಮಾಡುವಾಗ ಆ ದೇವರಲ್ಲಿ ಬೇರೊಂದು ದಿವ್ಯದೇಶದ ದೈವದ ಹೋಲಿಕೆ ಕಂಡುಬರುವುದು ಈ ರೀತಿ ಅವರು ತಮ್ಮ ಪಾಶುರಗಳಲ್ಲಿ ಭಾವ ಪರವಶತೆಯಿಂದ ಹಾಡುತ್ತಾರೆ. ಇದೊಂದು ವಿಲಕ್ಷಣ ಅನುಭಾವ. ಆದರೆ ತೊಂಡರಡಿಪ್ಪೊಡಿ ಆಳ್ವಾರ್ ಹಲವು ಕ್ಷೇತ್ರಗಳ ಪರ್ಯಟನಮಾಡಿಲ್ಲ ಅವರಿಗೆ ಶ್ರೀರಂಗವೊಂದೇ ಗೊತ್ತಿರುವುದು. ಶ್ರೀರಂಗನಾಥನಲ್ಲದೆ ಬೇರೆ ದೈವದ ಪರಿಚಯ ಅವರಿಗಿಲ್ಲ ಅವರ ದಿವ್ಯಪ್ರಬಂಧದಲ್ಲಿ ಅವರು ಶ್ರೀರಂಗನಾಥನಿಗೇ ತಮ್ಮ ಭಕ್ತಿ, ಶರಣಾಗತಿ ವ್ಯಕ್ತಪಡಿಸಿದ್ದಾರೆ ನಿಜಕ್ಕೂ ಶ್ರೀ ವೈಷ್ಣವರಿಗೆ ತಿರುವರಂಗ ಅಥವಾ ಶ್ರೀರಂಗವೇ ಪೆರಿಯ ಕೋಯಿಲ್ ಅಥವಾ ಹಿರಿದಾದ ದೇಗುಲ. ಅಲ್ಲಿಂದ ತಾನೇ ಶ್ರೀ ವೈಷ್ಣವ ಸಂಸ್ಕೃತಿ ಜಗತ್ತಿಗೆ ಪ್ರಸಾರಣಗೊಂಡಿದ್ದು ಆದ್ದರಿಂದ ರಂಗನೇ ದೈವ ಆ ದೈವವನ್ನು ಪರಿಭಾವಿಸಿದರೆ ನೂರೆಂಟು ದಿವ್ಯಕ್ಷೇತ್ರಗಳ ದೈವಗಳನ್ನು ಅನುಭವಿಸಿದಂತೆಯೇ ಸರಿ! ಆದ್ದರಿಂದ ಶ್ರೀರಂಗನಾಥನಲ್ಲಿ ಪ್ರಪತ್ತಿ ಅತಿ ಮುಖ್ಯ. ಪರಾಶರಭಟ್ಟರಂತೂ ಇನ್ನೂ ಒಂದು ಹೆಜ್ಜೆ ಮುಂದೆ ಹೋದರು. ಕಾವೇರಿಯೇ ವಿರಜಾನದಿ. ಶ್ರೀರಂಗಕ್ಷೇತ್ರವೇ ಪರಮಪದ. ಶ್ರೀರಂಗನಾಥನೇ ಶೇಷಶಾಯಿ ಮಹಾವಿಷ್ಣು ಆದ್ದರಿಂದ ರಂಗನ ಶರಣಾಗತಿ ಮಹಾವಿಷ್ಣುವಿನಲ್ಲಿ ಶರಣಾಗತಿ ನಡೆಸಿದಂತೆ! ಈ ರೀತಿ ತಿರುಮಾಲೈ ಪರಮಾತ್ಮನನ್ನು ಅಲಂಕರಿಸಿರುವ ಸಿರಿಮಾಲಿಕೆಯೇ ಆಗಿದೆ! ಆದ್ದರಿಂದಲೇ "ತಿರುಮಾಲೈ ಅರಿಯಾರ್ ಪೆರುಮಾಳ್ಳೆ ಅರಿಯಾರ್" ಎಂಬ ನಾಣ್ನುಡಿ ಹುಟ್ಟಿಕೊಂಡಿದೆ ತಿರುಮಾಲೈ ಇದರಿಂದ ವಿಶಿಷ್ಟಸ್ಥಾನವನ್ನು ದಿವ್ಯಪ್ರಬಂಧ ಪಂಕ್ತಿಯಲ್ಲಿ ಸಂಸ್ಥಾಪಿಸಿಕೊಂಡಿದೆ. ತಿರುಮಾಲೈಯಲ್ಲಿ ತೊಂಡರಡಿಪ್ಪೊಡಿಯಾಳ್ವಾರ್ ಅವರು ಮಾನವನ ಹಲವು ಅವಸ್ಥಾಂತರಗಳನ್ನು ಪ್ರಸ್ತಾಪಿಸಿದ್ದಾರೆ ಸಂಸಾರಸಾಗರದ ಸಂಘಕುಲದಿಂದ ತ್ರಸ್ತರಾಗಿ ಜೀವರು ಪರಮಾತ್ಮನು ಎದುರಿನಲ್ಲೇ ನಿಂತು ಅನುಗ್ರಹಿಸಲು ಸಿದ್ಧನಾಗಿ ಬಂದಿರುವಾಗಲೂ ಅವನನ್ನು ಅಲಕ್ಷಿಸಿ ತಮ್ಮನ್ನೇ ಮರೆತಿರುವುದನ್ನು ಕಂಡು ಅತೀವ ಮರುಗುತ್ತಾರೆ ಸ್ವಾರಸ್ಯವಾದ ಉದಾಹರಣೆಗಳಿಂದ ಕೂಡಿದ ತಿರುಮಾಲೈ ಪರಮಾದರಣೀಯ ಪ್ರಬಂಧವಾಗಿ ಈ ರೀತಿಯಿಂದ ಪರಿಗಣಿಸಲ್ಪಟ್ಟಿದೆ

ತಿರುಮಾಲೈಯನ್ನು ಆಳ್ವಾರ್ ಈ ರೀತಿ ಆರಂಭಿಸುತ್ತಾರೆ.

ಎಲೈ ರಂಗನಾಥನೇ! ಪಂಚೇಂದ್ರಿಯಗಳನ್ನು ನಿಗ್ರಹಿಸಿ ಕಲಿರೂಪವಾದ ಪಾಪರಾಶಿಗಳನ್ನೆಲ್ಲಾ ದಾಟಿ ಜಯಘೋಷ ಮಾಡಿ ಆನಂದದಿಂದ ಯಮಭಟರ ತಲೆಗಳ ಮೇಲೆ ನಡೆಯಬಲ್ಲ ಶಕ್ತಿಶಾಲಿಗಳಾಗಿದ್ದೇವೆ. ಇದೆಲ್ಲಾ ನಿನ್ನ ನಾಮದ ಪರಿಪಾಕದಿಂದ ಲಭ್ಯವಾಗಿದೆ. ಮುಂದಿನ ಪಾಶುರದಲ್ಲಿ ಪರಮಾತ್ಮನ ವರ್ಣನೆ ಸೊಗಸಾಗಿದೆ.

ಪಚ್ಚೈ ಮಾಮಲೈ ಪೋಲ್ ಮೇನಿ  
ಪ್ಪವಳವಾಯ್ ಕಮಲಚ್ಚೆಂಗಣ್  
ಅಚ್ಯುತಾ! ಅಮರರೇರೇ!  
ಆಯರ್ ತಂ ಕೊಳುಂದೇ ಎನ್ನುಂ  
ಇಚ್ಚುವೈ ತವಿರ ಯಾನ್  
ಪೋಯ್ ಇಂದಿರ ಲೋಕಮಾಳುಂ  
ಅಚ್ಚುವೈ ಪೆರಿನುಂವೇಂಡೇನ್  
ಅರಂಗ ಮಾನಗರುಳಾನೇ

ಮರಕತ ಪರ್ವತದಂತೆ ಶರೀರವಂತೆ! ಹವಳದ ಬಾಯಂತೆ! ಕಮಲದ ಕಣ್ಣಂತೆ! ಚ್ಯುತಿ ಇಲ್ಲದವನಂತೆ! ಅಮರರ ಅಧಿಪನಂತೆ! ಗೋಪಾಲಕರು 'ಮಗು' ಎಂದು ಪ್ರೀತಿಯಿಂದ ಕರೆಯುವ ಭಾಗ್ಯವಂತರಂತೆ! ಇಂತಹ ಸ್ವಾಮಿಯನ್ನು ಸ್ತುತಿಸುವ ನಾಮಗಳು ನಿಧಿಯಂತೆ! ಅದನ್ನು ಬಿಟ್ಟು ಇಂದ್ರಪದವಿ ನೀಡಿದರೂ ನನಗೆ ಬೇಡ. ಶಾಸ್ತ್ರಗಳ ಪ್ರಕಾರ ಆಯಸ್ಸು ನೂರು ವರುಷ, ಇದರಲ್ಲಿ ಅರ್ಧ ಭಾಗ ನಿದ್ರೆಯಲ್ಲಿ ಕಳೆಯುತ್ತದೆ ಮಿಕ್ಕ ಅರ್ಧಭಾಗ ಶೈಶವ, ಕೌಮಾರ, ಸುಖ, ಹಸಿವು ರೋಗ, ಮುಪ್ಪು ಕಷ್ಟ - ಇವುಗಳಲ್ಲೆ ಕಳೆದುಹೋದರೆ ನಿನ್ನನ್ನು ನೆನೆಯುವುದಕ್ಕೆ ಕಾಲವೇ ಸಿಗುವುದಿಲ್ಲವಲ್ಲ ಇಂತಹ ಜನ್ಮಗಳು ಏತಕ್ಕೆ ? ಬೇಡ - ಎನ್ನುತ್ತಾರೆ ಆಳ್ವಾರ್. "ಕ್ಷತ್ರಬಂಧು" ಎನ್ನುವವನು ಕ್ರೂರಿ, ಪಾಪಿ. ಆದರೆ ಕೇವಲ ಯಾರೋ ಹೇಳಿದ "ಗೋವಿಂದ" ಎಂಬ ಮೂರಕ್ಷರವನ್ನು ಉಚ್ಚರಿಸಿ ಪರಗತಿ ಕಂಡುಕೊಂಡ. ಹೀಗೆ ನಿನ್ನ ನಾಮದ ಮಹಿಮೆ ಎಷ್ಟು ಎಂದು ಬಣ್ಣಿಸಲು ಅಳವೆ! ಆದರೂ ಹೆಂಡರಿಂದ ಸುಖವು ದೊರೆಯುವುದೆಂದು ಭ್ರಮಿಸಿ ಸಂಸಾರದ ಕೋಟಲೆಗೆ ಸಿಲುಕಿ ಅಳಲುವರಲ್ಲ. ತುಳಸೀಮಾಲಾಧರನನ್ನು ನೆನೆಯದೆ ಕೇವಲ ಅನ್ನಕ್ಕಾಗಿ ದಾಸರಾಗುತ್ತಿದ್ದಾರಲ್ಲ ಅಯ್ಯೋ! ನಮ್ಮ ಸ್ವಭಾವ, ಮನಸ್ಸು ಎನ್ನುವುದು ಒಳಗಿನ ಗೋಡೆಯಂತೆ, ಶರೀರ ಎನ್ನುವುದು ಹೊರಗಣ ಆವರಣ. ಈ ಒಳಗಣ ಗೋಡೆಯನ್ನು ಅರಿಷಡ್ವರ್ಗಗಳಿಗೆ ತೆರೆದು ಹೊರಗಣ ಗೋಡೆಗೆ ಆಪತ್ತು ಬರುವಂತೆ ಮಾಡುವರಲ್ಲ. ದೈವವೆಂಬ ನಂಬಿಕೆ ಬಲವಾದಾಗ ಎಂದರೆ ಮನಸ್ಸು ಭದ್ರಗೊಂಡಾಗ ನಮ್ಮ ಹೊರಗಣ ಗೋಡೆ ತಾನೇ ಬಲಗೊಳ್ಳುವುದು.

ಇವಿಷ್ಟು ಭಗವನ್ನಾಮದ ಮಹಿಮೆ ಆಯಿತು. ಇನ್ನು ಆಳ್ವಾರ್ ಭಗವಂತನನ್ನು ಹೀಯಾಳಿಸುವ ಬೌದ್ಧ, ಶಾಕ್ಯ ಶೈವ ಮತಗಳನ್ನು ಖಂಡಿಸುತ್ತಾರೆ.

# ತಿರುಮಲೆಯಲ್ಲಿ ವಸತಿ ಸೇವಾಶುಲ್ಕ ಪರಿಷ್ಕರಣ

ತಿರುಮಲೆಯಲ್ಲಿನ ಗಣ್ಯವ್ಯಕ್ತಿಗಳ ವಸತಿಗಳ ದಿನಂಪ್ರತಿ ಸೇವಾಶುಲ್ಕವನ್ನು ಕೆಳಕಂಡಂತೆ ಪರಿಷ್ಕರಣಗೊಳಿಸಲಾಗಿದೆ. ಯಾತ್ರಿಕರು ದಯವಿಟ್ಟು ಗಮನಿಸಿ ಈ ಹೊಸ ದರ ಪಟ್ಟಿಯಂತೆ ಸೇವಾ ಶುಲ್ಕವನ್ನು ಸಲ್ಲಿಸಬೇಕೆಂದು ಕೋರಲಾಗಿದೆ

| ವಸತಿಯ ವಿವರ | ಹಿಂದಿನದರ ದಿನಂಪ್ರತಿ | ಈಗಣ ದರ ದಿನಂಪ್ರತಿ |
|---|---|---|
| 1 ಎಸ್ ಪಿ ಅತಿಥಿಗೃಹ ಪ್ರಾಂತ | | |
| ಎಸ್ ಪಿ.ಜಿ.ಎಚ್ ಅತಿಥಿಗೃಹ | | |
| ಸೂಟ್ 1 ಹಾಗೂ 9 (ಮಾಸ್ಟರ್‌ಸೂಟ್ಸ್) | ರೂ 1500/- | ರೂ 2500/- |
| ಸೂಟ್ 2 ರಿಂದ 8 ವರೆಗೆ | ರೂ 500/- | ರೂ 750/- |
| 2. ಹರಿಸದನ ಅತಿಥಿಗೃಹ | | |
| ಸೂಟ್ 1ರಿಂದ 7 | ರೂ 1000/- | ರೂ 1500/- |
| 3. ರಾಜ್ಯಲಕ್ಷ್ಮಿ ಅತಿಥಿಗೃಹ | | |
| ಸೂಟ್ 1 ರಿಂದ 4 | ರೂ 1000/- | ರೂ 1500/- |
| ಸೂಟ್ 5 (ಮಾಸ್ಟರ್ ಸೂಟ್) | ರೂ 1500/- | ರೂ 1500/- |
| 4. ವಿದ್ಯಾಸದನ ಅತಿಥಿಗೃಹ | | |
| ಸೂಟ್ 2 ರಿಂದ 5 | ರೂ 500/- | ರೂ 750/- |
| ಸೂಟ್ 1 (ಮಾಸ್ಟರ್ ಸೂಟ್) | ರೂ 1500/- | ರೂ 2000/- |
| 5. ಶ್ರೀನಿವಾಸ ನಿಲಯಂ | | |
| ಸೂಟ್ 1 ರಿಂದ 4 | ರೂ 500/- | ರೂ 1000/- |
| ಸೂಟ್ 5 | ರೂ 500/- | ರೂ. 500/- |
| 6. ಇಂದಿರಾ ಅತಿಥಿಗೃಹ | | |
| ಸೂಟ್ 1 ರಿಂದ 4 | ರೂ 500/- | ರೂ 750/- |
| 7. ಗೋದಾವರಿ ಅತಿಥಿಗೃಹ | | |
| ಸೂಟ್ 1 ರಿಂದ 4 | ರೂ 500/- | ರೂ. 750/- |
| 8 ಎಸ್ ವಿ. ಅತಿಥಿಗೃಹ ಪ್ರಾಂತ | | |
| ವಿಶೇಷ ರೀತಿಯ ಕಾಟೇಜುಗಳು | | |
| ಎಸ್ ಜಿ ಸಿ ಕಾಟೇಜುಗಳು | | |
| 1 ರಿಂದ 18, 20,22. | ರೂ 400/- | ರೂ. 600/- |
| 9. ನೂತನ ಅತಿಥಿಗೃಹಗಳು | | |
| ಅ) ವಿಷ್ಣು ನಿಲಯ | | ರೂ 750/- |
| ಒಳಗಣ 3 ಸೂಟ್‌ಗಳು | | |
| ನೆಲ ಅಂತಸ್ತು - 2 ಸೂಟುಗಳು | | ರೂ 750/- |
| ಮೊದಲ ಅಂತಸ್ತು ಮಾಸ್ಟರ್ ಸೂಟ್ | | ರೂ 2000/- |
| ಆ) ಬಾಲಾಜಿ ಕುಟೀರ | | |
| 6 ಸೂಟ್‌ಗಳು (ಧರ್ಮಗಿರಿ ರಸ್ತೆ) | | ರೂ 750/- |

ಯಾತ್ರಿಕ ಭಕ್ತರು ಮೇಲಿನ ಪರಿಷ್ಕೃತ ದರಗಳನ್ನು ಗಮನಿಸಿ ವಸತಿ ಸೌಕರ್ಯವನ್ನು ಬಳಸಿಕೊಳ್ಳಬೇಕೆಂದು ಕೋರಲಾಗಿದೆ

**ತಿ. ತಿ. ದೇ.**

ಭಗವನ್ನಿಂದಕರು ನಿಜಕ್ಕೂ ಭಾಗ್ಯಹೀನರೇ ಸರಿ. ಅವರು ಮಾಡುವ ನಿಂದೆ ಕೇಳಲು ಅಸಾಧ್ಯವಾದದ್ದು, ಅಸಹ್ಯವಾದದ್ದು ಆ ಭಗವನ್ನಿಂದೆಯೇ ಅವರಿಗೆ ರೋಗವಾಗಿ ಪರಿಣಮಿಸಿ ಅವರ ಪ್ರಾಣವನ್ನು ಕೊಳ್ಳಲಿ ಎಂದು ಹಾರೈಸುತ್ತಾರೆ ಹಾಗೆ ಅವರು ಸಾಯದೆ ಇನ್ನೂ ವಿಜೃಂಭಿಸಿದರೆ ಅವರಂತಹ ನಾಸ್ತಿಕ ವಾದಿಗಳ ಕೊರಳು ಕೊಯ್ದರೂ ಪಾಪ ಬರುವುದಿಲ್ಲ ಎಂದು ನಿಷ್ಠುರವಾಗಿಯೇ ನುಡಿಯುತ್ತಾರೆ ಆಳ್ವಾರ್ ಆಳ್ವಾರ್ ತಮ್ಮ ತಿರುಮಾಲೈ ಪ್ರಬಂಧದಲ್ಲಿ ಎರಡು ಮೂರು ಕಡೆಗಳಲ್ಲಿ ಸ್ವಲ್ಪ ನಿಷ್ಠುರವಾಗಿಯೇ ಪದ ಪ್ರಯೋಗ ಮಾಡಿದ್ದಾರೆ ಅವರು ಭಗವನ್ನಿಂದೆಯನ್ನೂ ನಾಸ್ತಿಕತೆಯನ್ನು ಸ್ವಲ್ಪವೂ ಸಹಿಸಲಾರರು

ಇನ್ನು ದೇವತಾಂತರವನ್ನು ಕುರಿತು ನಾಲ್ಕು ಮಾತುಗಳನ್ನು ಆಡುತ್ತಾರೆ ನಾರಾಯಣನಿಗಿಂತ ಬಿಟ್ಟು ಬೇರೆ ದೈವವುಂಟೇ! ಆತನೇ ಹಿರಿಯರಲ್ಲಿ ಹಿರಿಯ ಆತನನ್ನು ಬಿಟ್ಟು ಬೇರೆ ಚಿಲ್ಲರೆ ದೈವಗಳ ಶರಣಾಗತಿ ಮಾಡಿ ಹಾಳಾಗುವಿರಲ್ಲ ಎಂದು ತಪಿಸುತ್ತಾರೆ ದೇವತಾಂತರಗಳಿಗೆ ಅವಸಾನ ಎಂಟು ಆದರೆ ನಾರಾಯಣನಿಗೆ ಅದು ಇಲ್ಲ. ಆತ ಅನಾದಿ ಅನಂತ ವೇದಶಾಸ್ತ್ರಗಳು ಸಾರಿದರೂ ನಿಮಗೆ ವಿವೇಕವೇ ಬಾರದಲ್ಲ. ತನ್ನ ಹಿರಿಮೆಯನ್ನು ಸಾರಲೆಂದೇ ಆತ ದೇವತಾಂತರಗಳನ್ನು ನಿರ್ಮಿಸಿದ ಅವುಗಳು ಜನರನ್ನು ಧರ್ಮದಿಂದ ಹೊರಬರುವಂತೆ ಪ್ರೇರೇಪಿಸಿ, ಕಡೆಗೆ ಆ ಜನರಿಗೆ ಪಶ್ಚಾತ್ತಾಪ ಉಂಟಾಗಿ, ದೇವಾಧಿ ದೇವನ ಮಹಿಮೆ ಮನದಟ್ಟಾಗುವುದಂತೆ! ಇದು ಆಳ್ವಾರ್ ಅವರ ವಾದ! ಗರುಡ ಗಮನನು ಅನುಗ್ರಹ ಮಾಡಲು ಸದಾಸಿದ್ಧನಿದ್ದರೂ ಕ್ಷುದ್ರದೇವತೆಗಳ ಉಪಾಸನೆ ಮಾಡುತ್ತಿರುವಿರಲ್ಲ ಅದನ್ನು ಬಿಡಿ ಎಂದು ಉಪದೇಶ ನೀಡುತ್ತಾರೆ ಇದನ್ನು ಕೇಳಿರಿ! ನಂಬಿರಿ! ನಂಬದೆ ಕೆಡದೇಡಿ! ಎನ್ನುತ್ತಾರೆ ಆಳ್ವಾರ್ ಅವನ ಸಾಮರ್ಥ್ಯವನ್ನು ಸ್ವಾರಸ್ಯವಾಗಿ ಹೀಗೆ ವಿವರಿಸುತ್ತಾರೆ

ಬರುವಿಲ್ಲಾಲ್ ಓಂಗುಮುನ್ನೀರ್
ಅಡೈತ್ತು, ಉಲಗಂಗಳುಯ್ಯ
ಚ್ಚೆರುವಿಲೇ ಅರಕ್ಕರ್ ಕೋನೈ
ಚ್ಚೆತ್ತು, ನಂಶೇವಡನಾರ್
ಮರುವಿಯ ಪೆರಿಯ ಕೋಯಿಲ್
ಮದಿಳ್ ತಿರುವರಂಗಮೆನ್ನಾ
ಕರುವಿಲೇ ತಿರುವಿಲ್ಲಾ ದೀರ್
ಕಾಲತ್ತೈ ಕಳಿಕ್ಕಿನ್ರೀರೇ?

ಒಂದು ಬಾಣ ಮಾತ್ರದಿಂದ ಸಮುದ್ರದ ಅಬ್ಬರ ವನ್ನು ಅಡಗಿಸಿ ಲಂಕೆಗೆ ಸೇತುವೆ ಕಟ್ಟಿ ಸೀತೆಯನ್ನು ಬಿಡಿಸಿಕೊಳ್ಳುವುದು ಒಂದು ಕಾರಣವಾದರೆ, ರಾಕ್ಷಸರಾಜನಿಂದ ಇಡೀ ಲೋಕವನ್ನೇ ಪಾಲಿಸಿ ಶ್ರೀರಂಗದಲ್ಲಿ ಕಟಾಕ್ಷಿಸುತ್ತಾ ಶಯನಿಸಿರುವುದು ನಮ್ಮ ರಕ್ಷಣೆಂಬ ಅಂಶ ನಿಮ್ಮ ಗಮನಕ್ಕೆ ಬಾರದಿರುವುದು ವಿಷಾದನೀಯ. ಅವನನ್ನು ನೆನೆಯದೆ ನಿಮ್ಮ ಅಮೂಲ್ಯ ಜೀವನವನ್ನು ವ್ಯರ್ಥಗೊಳಿಸುತ್ತಿರುವಿರಲ್ಲ ಎಂದು ಆಳ್ವಾರ್ ಮರುಗುತ್ತಾರೆ

ಮುಂದಿನ ಪಾಶರವೂ ಅನುಸಂಧೇಯವಾಗಿದೆ. ಇದು ಪರಮಾತ್ಮನ ನಾಮದ ಮಹಿಮೆಯನ್ನು ಕುರಿತದ್ದು ಸೊಗಸಾದ ಪಾಶುರ-

ನಮನುಂ ಮುದ್ಗಲನುಂ ಪೇಶ<br>
ನರಗಿಲ್ ನಿನ್ನಾರ್‌ಗಳ್ ಕೇಳ್ಕ<br>
ನರಗಮೇ ಶುವರ್ಗಮಾಹುಂ<br>
ನಾಮಂಗಳು ಡೈಯನಂಬಿ<br>
ಅವನ ದೂರರಂಗ ಮೆನ್ನಾ<br>
ಅಯರ್ತು ವೀಳ್‌ಸ್ದಳಿಯ ಮಾನ್ದರ್<br>
ಕವಲೈಯುಳ್ ಪಡುಗಿನ್ರಾರ್<br>
ಎನ್ರದನುಕ್ಕೇ ಕವಲ್‌ಗಿನ್ರೇನೇ

ಯಮನೂ ಮುದ್ಗಲ ಋಷಿಯೂ ಭಗವಂತನ ಹಿರಿಮೆಯ ಬಗ್ಗೆ ಸಂಭಾಷಿಸುತ್ತಿದ್ದರೆ ಆ ಸಂಭಾಷಣೆ ನರಕದಲ್ಲಿ ಶಿಕ್ಷೆ ಅನುಭವಿಸುತ್ತಿರುವ ಜೀವಿಗಳ ಕಿವಿಗೆ ಬಿದ್ದಿತಂತೆ. ಪರಮಾತ್ಮನ ಮಹಿಮೆಯನ್ನು ಆಲಿಸಿದ ಅವರಿಗೆ ತಮ್ಮ ಶಿಕ್ಷೆಗಳೆಲ್ಲ ನಿವೃತ್ತಿಗೊಂಡಂತೆ ಭಾಸವಾಗಿ ನರಕವೇ ಸ್ವರ್ಗಸಮಾನವಾಗಿ ಸುಖ ತಂದಿತಂತೆ. ಭಗವನ್ನಾಮವನ್ನು ಆಲಿಸಿದ್ದಕ್ಕೇ ಈ ಸೌಭಾಗ್ಯ ದೊರೆಯುವಾಗ ಉತ್ತಮ ಸ್ಥಳದಲ್ಲಿ ಜನಿಸಿದ ಮಾನವ ಆತನನ್ನು ಮರೆತು ಬಾಳುತ್ತಿರುವುದನ್ನು ಕಂಡಾಗ ಅಯ್ಯೋ ಎನಿಸುದಿಲ್ಲವೆ

ಉಲ್ಲೋಲಕಲ್ಲೋಲವಾದ ಪ್ರಕ್ಷುಬ್ಧಸಾಗರದ ನೀರಿಂದ ಆವೃತವಾದ ಭೂಮಿ - ಮಾನುಗಳ ದುರ್ನಾತದಿಂದಲೂ ಸುತ್ತುವರಿಯಲ್ಪಟ್ಟಿದೆ ಚೇತನರು ಈ ಭೂಮಿಯ ವಾಸಿಗಳು. ಸುಗಂಧಯುಕ್ತ ವಾದ ತುಳಸೀ ಮಾಲಾಧಾರಿಯನ್ನಲ್ಲವೇ ಆಶ್ರಯಿಸಬೇಕಾದದ್ದು. ಹಾಗೆ ಜ್ಞಾನವನ್ನೇ ಹೊಂದದಿದ್ದರೂ ಬಡ ಆ ಜೀವರಾಶಿ 'ರಂಗನಾಥ' ಎಂದು ಆತನನ್ನು ಸ್ಮರಿಸಿದರೆ ಸಾಕು ಅವರಿಗೆಲ್ಲಾ ಮೋಕ್ಷಲಭಿಸಿ ನರಕ ಸದೃಶವಾದ ಭೂಮಿ ಬರಿಯಹುಲ್ಲು ಗಿಡಗಂಟೆಗಳಿಂದ ಆವೃತವಾಗಿ ನೋಡುವವರಿಲ್ಲದೆ ಹಾಳಾಗಿ ನಿಲ್ಲುತ್ತದೆ ಎನ್ನುತ್ತಾರೆ ಆಳ್ವಾರ್ ಜೀವರಾಶಿಗಳೆಲ್ಲಾ ಪರಮಾತ್ಮನ ನಾಮಸ್ಮರಣೆಯಿಂದ ಪರಮಪದವನ್ನು ಪಡೆದರೆ ಭೂಲೋಕವೆಲ್ಲ ಬರಡಾಗದೆ ಇನ್ನೇನು? ಇಲ್ಲಿ ಆಳ್ವಾರ್ ಸಮುದ್ರದ ಪ್ರಕ್ಷುಬ್ಧ ಪರಿಸ್ಥಿತಿ ಆವರಿಸಿದ ಭೂಮಿಯನ್ನು ಮಾನವನ ಅಶಾಂತಿ, ನೆಮ್ಮದಿ ಇಲ್ಲದ ಜೀವನಕ್ಕೆ ಹೋಲಿಕೆ ಕೊಡುತ್ತಾರೆ ಮೀನಿನ ದುರ್ನಾತವನ್ನು ಮಾನವನ ಇಂದ್ರಿಯ ವಾಸನೆ ಅರಿಷಡ್ವರ್ಗಗಳಿಗೆ ಸಾಮ್ಯಮಾಡುತ್ತಾರೆ ಪರಮಾತ್ಮ ಇವುಗಳಿಂದ ದೂರವಾಗಿರುವುದರಿಂದಲೇ ಆತನನ್ನು ಸುಗಂಧ ಯುಕ್ತವಾದ ತುಳಸೀಮಾಲಾಧರನೆಂದು ವರ್ಣಿಸುತ್ತಾರೆ ಆತನಲ್ಲಿನ ಸುಗಂಧವನ್ನು ಆಸ್ವಾದಿಸಬೇಕಾದರೆ ಮಾನವರು ತಮ್ಮ ಅಶಾಂತಿ, ಇಂದ್ರಿಯ ಚಾಪಲ್ಯಾದಿಗಳನ್ನು ತ್ಯಜಿಸಿದಾಗಲೇ ತಾನೆ ಸಾಧ್ಯ ಈ ದೃಷ್ಟಿಯಿಂದ ಈ ಪಾಶುರದ ಉತ್ಕೃಷ್ಟತೆಯನ್ನು ನಾವು ಅಳೆಯಬಹುದು

ಮುಂದಿನ ಪಾಶುರವೂ ಸುಂದರ ಶ್ರೀರಂಗಕ್ಷೇತ್ರದ ಸೊಬಗನ್ನು ವರ್ಣಿಸುವ ಪಾಶುರ-

ವಂಡಿನ ಮುರಲುಂ ಶೋಲೈ<br>
ಮಯಲಿನ ಮಾಲುಂ ಶೋಲೈ<br>
ಕೊಂಡಲ್ ಮೀದಣವುಂ ಶೋಲೈ<br>
ಕುಯಿಲಿನ ಕೂವುಂಶೋಲೈ<br>
ಅಂಡರ್ ಕೋನ್ ಅಮರುಂ ಶೋಲೈ<br>
ಅಣಿತಿರುವರಂಗಮೆನ್ನಾ<br>
ಮಿಂಡರ್ ಪಾಯ್‌ನ್ದುಣ್ಣುಂ ಶೋಲೈ<br>
ವಿಲಕ್ಕಿನಾಯ್‌ಕ್ಕಿಡುಮಿನೀರೇ

ಏನು ವೈಭವದ ಶ್ರೀರಂಗಕ್ಷೇತ್ರ, ಸುಖ ಸಂತೋಷಗಳಿಂದ ಸಮೃದ್ಧಿಯಾದ ಸ್ವರ್ಗವೇ ಅಲ್ಲವೆ? ಮೇಲೆ ಹೇಳಿದ ಅಲೆಗಳ ಆರ್ಭಟದಿಂದ ಆವರಿಸಿದ ಮೀನಿನ ದುರ್ನಾತದಿಂದ ತುಂಬಿದ ಭೂಮಿ ಎಲ್ಲಿ ? ದುಂಬಿಗಳು ಝೇಂಕರಿಸಿ ನಲಿಯುತ್ತಿರುವ, ನವಿಲುಗಳು ನರ್ತಿಸುತ್ತಲಿರುವ ಮೇಘಗಳು ಮೆಟ್ಟಿಲು ಮೆಟ್ಟಿಲಾಗಿ ತಂಗುವ ಕೋಗಿಲೆಗಳ ಕಲಕೂಜನದಿಂದ ತುಂಬಿಸಿರುವ ಇಂಪಾದ ತೋಟಗಳಿಂದ ರಂಜಿಸಿರುವ ಆನಂದಮಯ ತಾಣ ಶ್ರೀರಂಗಕ್ಷೇತ್ರ. ದೇವತೆಗಳ ಒಡೆಯನು ವಿಶ್ರಾಂತಿ ಸುಖವನ್ನು ಅನುಭವಿಸುತ್ತಿರುವ ಜಾಗ. ಈ ಕ್ಷೇತ್ರದ ನಾಮವನ್ನಾದರೂ ಉಚ್ಚರಿಸದಿರುವ ಜನರೇ ಮೂರ್ಖರು ಅಂತಹವರು ಅನ್ನವನ್ನು ಕಂಡರೆ ತಿನ್ನಲು ಮುನ್ನುಗ್ಗುತ್ತಾರೆ ಅವರಿಗೆ ಅನ್ನವನ್ನು ಇಕ್ಕಿದರೆ ಏನಾದರೂ ಪ್ರಯೋಜನವಿದೆಯೇ ? ಅವರಿಗೆ ಅನ್ನವಿಡುವುದಕ್ಕಿಂತ ನಾಯಿಗೆ ಇಕ್ಕಿದರೂ ಸಂತಸದಿಂದ ತಿಂದು ಕೃತಜ್ಞತೆಯನ್ನು ತೋರುತ್ತದೆ. ಶ್ರೀರಂಗದಂತಹ ಪಂಚಭಕ್ಷ್ಯವನ್ನು ಈ ಕೃತಘ್ನ ಜನರಿಂದ ದೂರವಿಟ್ಟರೂ ಒಳ್ಳೆಯದೇ. ಈ ಪಾಪಿಗಳಿಗೇಕೆ ಶ್ರೀರಂಗದಂತಹ ಸ್ವರ್ಗವಾಸ. ಬೇಡವೇ ಬೇಡ ಆಳ್ವಾರರು ಇಂತಹ ಮನುಷ್ಯರ ಬಗ್ಗೆ ನಿಷ್ಠುರರಾಗಿ ನುಡಿಯುತ್ತಾರೆ. ಅವರ ತೀರ್ಮಾನ ನ್ಯಾಯವಾಗಿಯೇ ಇದೆ. ಪವಿತ್ರ ಆಗಿರುವ ಕ್ಷೇತ್ರವನ್ನು ತಮ್ಮ ಹೀನ ಪ್ರವೃತ್ತಿಯಿಂದ ನರಕವನ್ನಾಗಿ ಮಾಡಿಬಿಡುತ್ತಾರೆ ಮಾನವರು

ಒಳ್ಳೆಯವರಿಗೆ ಒಳ್ಳೆಯ ಆಪ್ತಬಂಧು ಸಖ ಎನಿಸುವವನು ನನ್ನಂತಹ ಸುಳ್ಳರ ಪಾಲಿಗೆ ಸುಳ್ಳನೇ ಆಗಿ ಕಂಡುಬಂದು ದೂರವೇ ಇದ್ದು ಬಿಡುತ್ತಾನೆ. ನಾಸ್ತಿಕವಾದಿಗಳಿಗೆ ಅದರಿಂದಲೇ ಅವನು ಅಲಭ್ಯ ಉಜ್ಜೀವಿಸುವವರಿಗೆ ಮಾತ್ರ ಅವನ ಅಸ್ತಿತ್ವ ಕಂಡುಬರುತ್ತದೆ ಇಂತಹ ಸಾಕ್ಷಾತ್ಕಾರ ಮಾಡಿಸುವ ಸ್ವಾಮಿ ಶ್ರೀರಂಗದಲ್ಲಿ ಸೊಗಸುವ ಗಣೆಯಲ್ಲವೆ. ಜೂಜು, ಧೂರ್ತರ ಸಂಗ, ಸ್ತ್ರೀ ವ್ಯಾಮೋಹ - ಇವುಗಳಲ್ಲಿ ಸಿಕ್ಕಿ ಒದ್ದಾಡುತಿದ್ದವನನ್ನು 'ಅಯ್ಯೋ ಅನ್ಯಾಯವಾಗಿ ಹಾಳಾಗುತ್ತಿರುವೆಯಲ್ಲ' ಎಂದು ಕನಿಕರಿಸಿ ಆದರಿಸಿ ಉದ್ಧರಿಸಿದವನು ಶ್ರೀರಂಗದ ಸ್ವಾಮಿಯಲ್ಲವೇ? ನಿನ್ನನ್ನು ಆಶಿಸಿ ಸ್ತುತಿಸುವ ಶಕ್ತಿಯಿಲ್ಲ. ನಿನ್ನನ್ನು ಆದರಿಸುವ ಪರಿಯನ್ನರಿಯೆ. ಕಬ್ಬಿಣದಂತಹ ಕಠಿಣಚಿತ್ತವನ್ನು ಸ್ವಲ್ಪ ಸ್ವಲ್ಪವಾಗಿ ಕರಗಿಸುವ ಆ ದಿವ್ಯವಾದ ಉದ್ಯಾನಗಳಿಂದ ಆವೃತವಾದ ಶ್ರೀರಂಗದಲ್ಲಿ ಪವಡಿಸಿರುವ ಕಬ್ಬಿನಂತೆ ಸಿಹಿಯಾದ ಸ್ವಾಮಿಯ ದರ್ಶನದಿಂದ ನನ್ನ ಕಣ್ಣುಗಳು ಧನ್ಯವಾಗಿವೆ ಎನ್ನುತ್ತಾರೆ ಆಳ್ವಾರ್. ಕಬ್ಬಿನಂತೆ ಸಿಹಿಯಾದವನೆಂಬ ಉಪಮೆಯನ್ನು ತಿರುಕ್ಕುರುಂದಾಂಡಗಮ್‌ನಲ್ಲಿ ನಾಲ್ಕೈದು ಕಡೆ ಉಪಯೋಗಿಸಿರುವುದು ಇಲ್ಲಿ ಗಮನಾರ್ಹ. ನಿನ್ನ ದರ್ಶನವನ್ನು ಪಡೆದ ಕಣ್ಣುಗಳು ಮತ್ತೇನನ್ನೂ ನೋಡುವುದು ಬೇಡ ಎಂದು ತಿರುಪ್ಪಾಣೆ ಆಳ್ವಾರರು ತಮ್ಮ ಪ್ರಬಂಧದಲ್ಲಿ ಹಾಡಿರುವುದನ್ನು ಇಲ್ಲಿ ನನೆಯಬಹುದಾಗಿದೆ. ಮುಂದಿನ ಪಾಶುರದಲ್ಲಿ ವ್ಯಕ್ತವಾಗಿರುವ ಭಾವೋದ್ವೇಗ ಭಕ್ತನ ರಸಸಮಾಧಿಸ್ಥಿತಿಯನ್ನು ಸಾರುವ ಭವ್ಯಚಿತ್ರಣ. ಈ ಸ್ಥಿತಿ ಮುಂದಿನ ಮೂರು ನಾಲ್ಕು ಪಾಶುರಗಳಲ್ಲಿ ಸಾಗುತ್ತದೆ.

(ಮುಂದುವರೆಯುವುದು)

# ತಿರುಮಲ ತಿರುಪತಿ ದೇವಸ್ಥಾನಗಳು, ತಿರುಪತಿ.



# ಶ್ರೀ ಪದ್ಮಾವತೀ ಅಮ್ಮನವರ ನಿತ್ಯ ಅನ್ನಪ್ರಸಾದ ಯೋಜನೆ

ಭಕ್ತರ ಹಾಗೂ ದಾನಿಗಳ ದಾನಸ್ವೀಕರಣೆಯಿಂದ ಶ್ರೀ ಪದ್ಮಾವತೀ ಅಮ್ಮನವರ ನಿತ್ಯ ಅನ್ನಪ್ರಸಾದ ಯೋಜನೆಯನ್ನು ಆರಂಭಗೊಳಿಸಲಾಗಿದೆ

ಈ ಯೋಜನೆಗೆ ದಾನ ನೀಡಬಯಸುವ ಭಕ್ತರು ರೂ 50,000/- ಅಥವಾ ಅದರ ಗುಣಕಗಳಲ್ಲಿ ನೀಡಬಹುದು. ವ್ಯಕ್ತಿ/ಇಬ್ಬರಿಗೆ ಮೀರದಂತೆ, ಒಂದು ಕುಟುಂಬ / ಎರಡು ಕಂಪನಿ ಅಥವಾ ಉದ್ದಿಮೆಗಳು - ಈ ದಾನಗಳನ್ನು ನೀಡಬಹುದು. ಅವರಿಗೆ ದೊರೆಯುವ ಸೌಲಭ್ಯಗಳು ಹೀಗಿರುತ್ತವೆ-

1. ದಾನಿಗಳ ಹೆಸರನ್ನು ತಿರುಚಾನೂರಿನ ಶ್ರೀ ಪದ್ಮಾವತೀ ಅಮ್ಮನವರ ಆಲಯದಲ್ಲಿ ಐದು ವರ್ಷ ಗಳು ಪ್ರಧಾನವಾಗಿ ಎದ್ದು ಕಾಣುವಂತೆ ಬರೆದು ಇಡಲಾಗುವುದು.
2. ಶ್ರೀ ಪದ್ಮಾವತೀ ಅಮ್ಮನವರ ಆಲಯದಲ್ಲಿ ಐದು ವರ್ಷಗಳ ಅರ್ಚನೆಯ ಸಮಯದಲ್ಲಿ ದಾನಿಗಳ ಗೋತ್ರವನ್ನು ಹೇಳಲಾಗುವುದು.
3. ಶ್ರೀ ಪದ್ಮಾವತೀ ಅಮ್ಮನವರ ಆಲಯದಲ್ಲಿ ಐದು ವರ್ಷಗಳ ಕಾಲ ವರ್ಷಕ್ಕೆ ಒಂದು ಸಲ ಸರ್ವದರ್ಶನ ಸಮಯದಲ್ಲಿ ವಿಶೇಷ ಪ್ರವೇಶದ ಮೂಲಕ ಐದುಮಂದಿಗೆ ಉಚಿತ ದರ್ಶನವನ್ನು ಏರ್ಪಡಿಸಲಾಗುವುದು.
4. ದಾನಿಗಳು ಮೊದಲಬಾರಿಗೆ ಶ್ರೀ ಪದ್ಮಾವತೀ ಅಮ್ಮನವರನ್ನು ದರ್ಶಿಸಲು ಬಂದಾಗ ಅವರಿಗೆ ಒಂದು ಅಂಗವಸ್ತ್ರವನ್ನು ಬಹೂಕರಿಸಲಾಗುವುದು.

ಭಕ್ತರು ರೂ 1000/- (ಒಂದು ಸಾವಿರ ರೂಪಾಯಿ) ಹಾಗೂ ಗುಣಕಗಳಲ್ಲಿ ಸಹ ಶ್ರೀ ಪದ್ಮಾವತೀ ಅಮ್ಮನವರ ನಿತ್ಯ ಅನ್ನಪ್ರಸಾದ ಯೋಜನೆಗೆ ದಾನಗಳನ್ನು ನೀಡಬಹುದು ಅವರಿಗೆ ವರ್ಷಕ್ಕೆ ಒಮ್ಮೆ ಒಬ್ಬರಿಗೆ ಉಚಿತ ದರ್ಶನವನ್ನು ಏರ್ಪಡಿಸಿ ಶ್ರೀ ಪದ್ಮಾವತೀ ಅಮ್ಮನವರ ಆಶೀರ್ವಾದದೊಡನೆ ಕುಂಕುಮ ಪ್ರಸಾದವನ್ನು ನೀಡಲಾಗುವುದು

ಈ ಯೋಜನೆಗೆ ದಾನವಾಗಿ ನೀಡಬಹುದಾದ ಕನಿಷ್ಠ ಧನರಾಶಿ ಯೆಂದರೆ ರೂ 1000/- (ಒಂದು ಸಾವಿರ ರೂಪಾಯಿ) ಯಾವುದೇ ರಾಷ್ಟ್ರೀಕೃತ ಬ್ಯಾಂಕಿನಲ್ಲಿ ಕಾರ್ಯನಿರ್ವಹಣಾಧಿಕಾರಿ ತಿ.ತಿ. ದೇ. ತಿರುಪತಿ ಇವರ ಹೆಸರಿನಲ್ಲಿ ಡಿ.ಡಿ ಯನ್ನು ಪಡೆದು, ಸಹಾಯಕ ಕಾರ್ಯನಿರ್ವಹಣಾಧಿಕಾರಿ, ಶ್ರೀ ಪದ್ಮಾವತೀ ಅಮ್ಮನವರ ಆಲಯ, ತಿರುಚಾನೂರು - ಚಿತ್ತೂರುಜಿಲ್ಲೆ - 517 503 - ಈ ವಿಳಾಸಕ್ಕೆ ಕಳುಹಿಸಬಹುದು ರೂ 1000/- ಕ್ಕಿಂತ ಕಡಿಮೆ ಮೊತ್ತದ ಧನದಾನಗಳನ್ನು ದಾನಿಗಳಿಗೆ ಯಾವುದೇ ನಿರೂಪಣೆಯನ್ನೂ ನೀಡದೆ ಶ್ರೀ ಪದ್ಮಾವತೀ ಅಮ್ಮನವರ ನಿತ್ಯಾನ್ನ ಪ್ರಸಾದ ಯೋಜನೆಯಲ್ಲಿ ಸೇರಿಸಲಾಗುವುದು

ಈ ಯೋಜನೆಯ ಹೆಚ್ಚಿನ ವಿವರಗಳನ್ನು ಪಡೆಯಬಹುದಾದ ವಿಳಾಸ -

**ಸಹಾಯಕ ಕಾರ್ಯನಿರ್ವಹಣಾಧಿಕಾರಿ**

ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ

ತಿರುಚಾನೂರು - 517 503

ಚಿತ್ತೂರು ಜಿಲ್ಲೆ, ಆಂಧ್ರಪ್ರದೇಶ್

ಕಾರ್ಯನಿರ್ವಹಣಾಧಿಕಾರಿ,

ತಿ. ತಿ. ದೇವಸ್ಥಾನಗಳು.

# ಚತುರ್ವಿದ ಪುರುಷಾರ್ಥ

- ಕಂದಾಡೈಕೇಶವನ್.

ಧರ್ಮ, ಅರ್ಥ, ಕಾಮ, ಮೋಕ್ಷ ಇವು ನಾಲ್ಕು ಪುರುಷಾರ್ಥಗಳು ಮಾನವರು ಪ್ರಪಂಚದಲ್ಲಿ ಈ ನಾಲ್ಕರ ಸುತ್ತ ತಮ್ಮ ಜೀವನವನ್ನು ನಾಲ್ಕು ದಶೆಗಳಲ್ಲಿ ಬಾಲ್ಯ, ಯೌವನ, ವಾರ್ಧಕ್ಯ ಅಂತ್ಯಕಾಲಗಳಲ್ಲಿ ಹಣಗಾಡಿ ಪುರುಷಾರ್ಥಗಳನ್ನು ಗಳಿಸುತ್ತಾರೆ ಮನುಸ್ಮೃತಿ ಬೋಧಿಸುತ್ತೆ-

ಶ್ರುತಿ ಸ್ಮೃತ್ಯುದಿತಂ ಧರ್ಮ-
ಮನುತಿಷ್ಟನ್ ಹಿ ಮಾನವಃ
ಇಹ ಕೀರ್ತಿ ಮವಾಪ್ನೋತಿ
ಪ್ರೇತ್ಯ ಚಾನುತ್ತಮಂ ಸುಖಂ

ಶ್ರುತಿ ಸ್ಮೃತಿಗಳಲ್ಲಿ ತಿಳಿಸಿದ ಧರ್ಮವನ್ನು ಆಚರಿಸುವ ಮನುಷ್ಯನು ಈ ಲೋಕದಲ್ಲಿ ಕೀರ್ತಿಯನ್ನೂ ಪರಲೋಕದಲ್ಲಿ ಸುಖವನ್ನೂ ಪಡೆಯುತ್ತಾನೆ - ಪ್ರತಿಯೊಬ್ಬ ಚೇತನನೂ ತಾನು ಹಿಂದ ಮಾಡಿದ ಪುಣ್ಯ ಪಾಪ ಕರ್ಮಗಳ - ಧರ್ಮಾಧರ್ಮಗಳ ಪ್ರಭಾವ ಎಂದರೇ ಈ ಜನ್ಮದಲ್ಲಿ ಸುಖ ದುಃಖಗಳನ್ನು ಅನುಭವಿಸುತ್ತಾನ ಎಂಬುದು ಸರ್ವಸಮ್ಮತವಾದ ಮತ. ಪಾಪ ಪುಣ್ಯಗಳ ಫಲಗಳನ್ನೇ ಹಲವರು ದೈವ ಅಥವಾ ಅದೃಷ್ಟವೆಂದೂ ಕರೆಯುತ್ತಾರೆ ನಿರುಕ್ತಕಾರರು - ಪೂರ್ವಜನ್ಮ ಕೃತಂ ಕರ್ಮಂ ತದ್ದೈವಮಿತಿ ಕಥ್ಯತೇ ಎಂದರು ನಿಷಿದ್ಧಕರ್ಮಗಳಿಂದ ಪಾಪವೂ ವಿಹಿತ ಕರ್ಮಗಳಿಂದ ಪುಣ್ಯವೂ ಲಭಿಸುತ್ತೆ ಹೀಗೆ ಸ್ಮೃತಿ ಶ್ರುತಿ ಇತಿಹಾಸ ಪುರಾಣಗಳಲ್ಲಿ ತಿಳಿಸಿರುವ ವಿಹಿತ ಕರ್ಮಗಳ ಆಚರಣೆಯಿಂದ ಧರ್ಮ ಸಂಪಾದನೆ ಮನುಷ್ಯನು ಮೋಕ್ಷವನ್ನು ಅಪೇಕ್ಷಿಸುವುದೇ ಅವನ ಪರಮಗುರಿ ಮೋಕ್ಷಸಾಧನೆಗೆ ಧರ್ಮವು ಸಾಧನವಾಗಿದೆ ಧರ್ಮಾಚರಣೆಗೆ ಅರ್ಥ ಕಾಮಗಳೂ ಅಷ್ಟೇ ಅವಶ್ಯಕವಾಗಿವೆ ಹಣ-ವಿರಿತ್ಯಾಜ್ಯವಾದುಗಳಲ್ಲಿ, ಹಣಗಳಸಬೇಕು ಯೋಗ್ಯ ರೀತಿಯಿಂದ ಗಳಿಸಿದ ಸಿರಿಯನ್ನು ಒಳ್ಳೆಯ ಕೆಲಸಗಳಿಗೆ ಉಪಯೋಗಿಸಿದರೆ, ದಾನ ಪುಣ್ಯಕಾರ್ಯಗಳಿಗ ಅದರ ವಿನಿಯೋಗ - ಧರ್ಮದ ಪಾಲನೆ ಮಾನವನ ಏಳಿಗೆ ವಿಧಿಯಿಂದ ಆಚರಣೆ ಮಾಡುವುದೇ ಧರ್ಮ ಕಾಮವೂ ವಿಧಿಯುಕ್ತ ಆಚರಿಸಿದರೆ ಅಧರ್ಮವಲ್ಲ ಧರ್ಮದಿಂದ ಆಚರಿಸಿದ ಭೋಗಗಳು (ಕಾಮ) ಧರ್ಮವೇ ವಿಧಿಯೆಂದರೆ ಶಾಸ್ತ್ರಗಳು ತಿಳಿಸುವ ನಿಯಮ ವಿಧಾನಗಳು ನಾಲ್ಕು ಪುರುಷಾರ್ಥಗಳು ಗುಟ್ಟು ಇಷ್ಟೇ ಚಾಣಕ್ಯನ ನೀತಿ ಪ್ರಕಾರ

ಸುಖಸ್ಯ ಮೂಲಂ ಧರ್ಮಃ
ಧರ್ಮಸ್ಯ ಮೂಲ ಮರ್ಥಂ

ಧರ್ಮಾರ್ಥಾ ವಿರೋಧೇನ
ಕಾಮಂ ಸೇವೇತ
(ಧರ್ಮಾರ್ಥಗಳಿಗೆ ವಿರುದ್ಧವಲ್ಲದ ಕಾಮವು ಸ್ವೀಕೃತ) ಮೋಕ್ಷಧರ್ಮಂ ಆಚರತ

ಧರ್ಮವೆಂಬುವುದು ಹಡಗು ಅದನ್ನೇರಿ ಅರ್ಥ ಕಾಮಗಳೆಂಬ ಹುಟ್ಟುಗಳ ಸಹಾಯದಿಂದ ಅಪಾರ ಸಂಸಾರ ಸಾಗರವೆಂಬುವುದನ್ನು ದಾಟಿ ಪರಮ ಪುರುಷಾರ್ಥವಾದ ಮೋಕ್ಷವೆಂಬ ದಡವನ್ನು (ವೈಕುಂಠವನ್ನು) ಸೇರಲು ಎಲ್ಲಾ ಮಾನವರು ಪ್ರಯತ್ನಿಸಬೇಕು ಯಾಜ್ಞವಲ್ಕ್ಯ ಸ್ಮೃತಿಯಲ್ಲಿ-

ಪುರಾಣ ನ್ಯಾಯಾ ಮೀಮಾಂಸಾ
ಧರ್ಮ ಶಾಸ್ತ್ರಾಂಗ ಮಿಶ್ರಿತಾಃ
ವೇದಾಃ ಸ್ಥಾನಾನಿ ವಿದ್ಯಾನಾಂ
ಧರ್ಮಸ್ಯ ಚ ಚತುರ್ದಶ

ಎಂಬುವುದಾಗಿ ಹೇಳುವಾಗ ಹದಿನೆಂಟು ಪುರಾಣಗಳು ನ್ಯಾಯಾ ಮೀಮಾಂಸಾ ಧರ್ಮಶಾಸ್ತ್ರಗಳು ಶಿಕ್ಷಾ ಕಲ್ಪ ವ್ಯಾಕರಣ ನಿರುಕ್ತ ಛಂದ ಜ್ಯೋತಿಷ ಮೊದಲಾದ ಆರು ಅಂಗಗಳಿಂದ ಕೂಡಿದ ನಾಲ್ಕು ವೇದಗಳು ಧರ್ಮಕ್ಕೆ ಸಹಾಯಕಗಳು ಎನ್ನಲಾಗಿದ.

## ವರ್ಣಾಶ್ರಮ

ಸನಾತನ ಧರ್ಮವು ವರ್ಣಾಶ್ರಮ ಧರ್ಮದ ಮೇಲೆ ನಿಂತಿದೆ. ಇದು ಭಾರತೀಯ ಸಂಸ್ಕೃತಿಯ ಪ್ರಧಾನ ಸ್ವರೂಪ ಮಾನವರ ಏಳಿಗೆಗೆ ಆಶ್ರಮ ಚತುಷ್ಟಯಗಳು ಮೆಟ್ಟಲುಗಳಿರುವಂತೆ ಬ್ರಹ್ಮಚರ್ಯ, ಗೃಹಸ್ಥಾಶ್ರಮ, ವಾನಪ್ರಸ್ಥ ಮತ್ತು ಸನ್ಯಾಸ ಆಶ್ರಮಗಳು ಎಂಬವು ನಾಲ್ಕು. ಬ್ರಹ್ಮಚರ್ಯಾಶ್ರಮದಲ್ಲಿ ಜ್ಞಾನಾರ್ಜನೆ ಗೃಹಸ್ಥಾಶ್ರಮ ಸಮಾಜದ ಬಹು ಪವಿತ್ರವಾದ ಆಶ್ರಮ ಇಲ್ಲಿ ಪ್ರೀತಿ, ತ್ಯಾಗ, ಸದಾಚಾರ, ಪರೋಪಕಾರ, ಧರ್ಮಪಾಲನೆಗೆ ನಿಜವಾದ ಸ್ಥಳ. ನಿಃಸ್ವಾರ್ಥತೆಯಿಂದ ತನ್ನದೆಂಬ ಕುಟುಂಬವನ್ನು ಬಿಟ್ಟು ವಿಶ್ವಕುಟುಂಬಕ್ಕೆ ಮಾಡುವ ಸೇವಾ ವ್ಯವಸ್ಥೆಯೇ ವಾನಪ್ರಸ್ಥದ ಗುಟ್ಟು. ಸನ್ಯಾಸವೆಂದರೆ ಸರ್ವರಲ್ಲಿ ಸಮನ್ವಯ ದೃಷ್ಟಿ ಅಹಂಕಾರ ಮಮಕಾರಗಳನ್ನು ತೊರೆದು ಇಡೀ ಸಮಾಜಕ್ಕೆ ಪ್ರೀತಿಯಿಂದ ಮಾಡುವ ನಿಸ್ವಾರ್ಥ ಸೇವೆಯ ಅವಸ್ಥೆಯೇ ಸನ್ಯಾಸ.

ಭಗವದ್ಗೀತೆಯಲ್ಲಿ ಸ್ವಾಮಿ ನಾಲ್ಕನೆಯ ಅಧ್ಯಾಯದಲ್ಲಿ-

ಚಾತುರ್ವರ್ಣ್ಯಂ ಮಯಾ
ಸೃಷ್ಟಂ ಗುಣ ಕರ್ಮ ವಿಭಾಗಶಃ
ತಸ್ಯ ಕರ್ತಾರಮಪಿ ಮಾಂ
ವಿದ್ಧ್ಯ ಕರ್ತಾರಮವ್ಯಯಮ್

ಗುಣ ಮತ್ತು ಕರ್ಮಗಳ ವಿಭಾಗದಿಂದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಎಂಬುವ ನಾಲ್ಕು ವರ್ಣಗಳು ನನ್ನಿಂದ ರಚಿಸಲ್ಪಟ್ಟಿವೆ ಅದರ ಕರ್ತೃವಾಗಿದ್ದರೂ ನನ್ನನ್ನು ಅವ್ಯಯನೆಂದೂ ಅಕರ್ತೃವೆಂದೂ ತಿಳಿ ಈ ಲೇಖಕನ ತಂದೆಯವರಾದ ಶ್ರೀಮಾನ್ ಕೋಯಿಲ್ ಕಂದಾಡೈ ಕೃಷ್ಣಮಾಚಾರ್ಯ ಸ್ವಾಮಿಗಳು ಭಗವದ್ಗೀತೆಯ ಉಪನ್ಯಾಸಗಳನ್ನು ಚಿಕ್ಕಬಳ್ಳಾಪುರದಲ್ಲಿ ನೀಡುತ್ತಿದ್ದ ಸಂದರ್ಭ ನಾಲ್ಕು ವರ್ಣಗಳ ಕರ್ಮಗಳ ವಿಭಾಗದಿಂದ ಪ್ರತಿಯೊಬ್ಬರೂ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಶೂದ್ರರಾಗುತ್ತಾರೆ ಬ್ರಾಹ್ಮಣ ವಂಶದಲ್ಲಿ ಹುಟ್ಟಿದ ಮಾತ್ರಕ್ಕೆ ಅವನು ಬ್ರಾಹ್ಮಣನಾಗಲಾರ ಉಪನಯನವಾಗಿ ವೇದಾಧ್ಯಯನ ದೊಡನೆ ಸದಾಚಾರನಾಗಿದ್ದ ಮಾತ್ರಕ್ಕೆ ಅವನು ಬ್ರಾಹ್ಮಣ ಅವರು ಒಂದೇ ವಾಕ್ಯದಲ್ಲಿ ನಾಲ್ಕು ವರ್ಣದವರ ಕರ್ತವ್ಯ ಅವರ ಕರ್ಮ ವಿಭಾವಗಳನ್ನು ಹೇಳುವಾಗ ಸದಾ ಚರಣ ತತ್ಪರಃ ಎಂಬುವ ವಾಕ್ಯವನ್ನು ಉದಹರಿಸಿ ಸತ್ + ಆಚರಣ ತತ್ಪರಃ - ಎಂದರೆ ಸತ್ವಗುಣ ಪ್ರಧಾನವುಳ್ಳವರು ಒಳ್ಳೆಯ ನಡೆತವುಳ್ಳವರು ಬ್ರಾಹ್ಮಣರು, ಸದಾ ಚ + ರಣ ತತ್ಪರಃ. ಯಾವಾಗಲೂ ಶೌರ್ಯ ಯುದ್ಧಾದಿ ಕರ್ಮಗಳನ್ನೂ ತಮ್ಮ ಸತ್ವರಜಸ್ಸು ಗುಣದಿಂದ ಆಚರಿಸುವರು ಕ್ಷತ್ರಿಯರು ಸದಾ ಆಚರಣ ತತ್ಪರಃ, ರಜಸ್ಸು ತಮಸ್ಸುಗುಣಗಳಿಂದ ಕೂಡಿದವರು ದಾನ ಮಾಡುವುದರಲ್ಲಿ ಕೃಷಿ ವಾಣಿಜ್ಯಾದಿ ಕರ್ಮಗಳನ್ನು ಮಾಡುವರು ವೈಶ್ಯರು ಸದಾ + ಚರಣ ತತ್ಪರಃ ತಮಃ ಪ್ರಧಾನವಾಗಿ ಅನ್ಯರ ಸೇವಾಕಾರ್ಯವನ್ನೇ ಮಾಡುವವರು ಶೂದ್ರರು ಯಾರೂ ಯಾರಿಗಿಂತ ಕೀಳಲ್ಲ ಎಂದು ವಿವರಿಸುತ್ತಿದ್ದರು ಪುರುಷ ಸೂಕ್ತದಲ್ಲಿ ತಿಳಿಸಿರುವಂತೆ ಪರಮಾತ್ಮನ ಮುಖದಿಂದ ಬ್ರಾಹ್ಮಣರು, ಬಾಹುಗಳಿಂದ ಕ್ಷತ್ರಿಯರು ತೊಡೆಗ







ಳಿಂದ ವೈಶ್ಯರೂ, ಪಾದಗಳಿಂದ ಶೂದ್ರರು ಜನಿಸಿದರೆಂಬುವ ಮಹಾಮಂತ್ರದ ಅರ್ಥ ತಿಳಿದಾಗ, ಪರಮಾತ್ಮನಲ್ಲಿ ಶರಣಾಗತಿಯನ್ನು ಹೊಂದಬೇಕಾದರೆ, ನಮಸ್ಕಾರ ಮಾಡಬೇಕಾದರೆ ಅವನ ಚರಣಗಳಿಗೆ ಮಾತ್ರ ನಾವು ಶರಣು ಹೋಗಬೇಕು. ಪಾದವೂ ಪವಿತ್ರವೇ - ಆದ್ದರಿಂದ ಪರಮಾತ್ಮನ ಸೃಷ್ಟಿಯಲ್ಲಿ ಎಲ್ಲಾ ವರ್ಣದವರೂ ಶ್ರೇಷ್ಠರೇ ಎಂಬ ಭಾವ ನಮಗೆ ಗೋಚರವಾಗುತ್ತೆ. ಪರಮಾತ್ಮನಿಗೆ ನಾಲ್ಕರ ಸಂಖ್ಯೆ ಬಹು ಪ್ರಿಯವಾಗಿರಬೇಕು. ಭಗವದ್ಗೀತೆಯ ಏಳನೆಯ ಅಧ್ಯಾಯದಲ್ಲಿ-

ಚತುರ್ವಿಧಾ ಭಜಂತೇ ಮಾಂ
ಜನಾಃ ಸುಕೃತಿನೋಽರ್ಜುನ
ಆರ್ತೋ ಜಿಜ್ಞಾಸು ರರ್ಥಾರ್ಥೀ
ಜ್ಞಾನೀ ಚ ಭರತರ್ಷಭ

ಎಲೈ ಅರ್ಜುನನೇ! ಸಂಕಟಕ್ಕೆ ಸಿಕ್ಕಿ ದೀನನಾದವನು (ಆರ್ತೀ) ಭಗವಂತನ ತತ್ವವನ್ನು ತಿಳಿಯಲು ಅಪೇಕ್ಷಿಸುವವನು (ಜಿಜ್ಞಾಸು), ಅರ್ಥಾರ್ಥಿ (ಐಶ್ವರ್ಯಕಾಮಿ), ಭಗವಂತನಿಗೆ ಶೇಷವಾದ ಆತ್ಮಸ್ವರೂಪವನ್ನು ಅರಿತ (ಜ್ಞಾನೀ) ಈ ನಾಲ್ಕು ಬಗೆಯವರಾದ ಸುಕೃತಿಗಳಾದ ಜನರು ನನ್ನನ್ನು ಭಜಿಸುತ್ತಾರೆ. ಗೀತೆಯ ಹಿಂದಿನ ಶ್ಲೋಕದಲ್ಲಿ - ನಮಾಂ ದುಷ್ಕೃತಿನೋ ಮೂಢಾಃ ಪ್ರಪದ್ಯಂತೇ ನರಾಧಮಾಃ - ಎಂಬುವುದರಲ್ಲಿ ದುಷ್ಕೃತಿಗಳೂ ಕೂಡ ನಾಲ್ಕು ವಿಧವಾಗಿರುತ್ತಾರೆ ೧) ಮೂಢರು, ೨) ನರಾಧಮರು, ೩) ಮಾಯೆಯಿಂದ ಅಪಹರಿಸಲ್ಪಟ್ಟ ಜ್ಞಾನವುಳ್ಳವರು, ೪) ಅಸುರಭಾವವನ್ನು ಆಶ್ರಯಿಸಿದವರು, ಭಗವಂತನಾದ ಶ್ರೀಕೃಷ್ಣನು ನಾಲ್ಕು ಸಂಖ್ಯೆಗಳ ಒಡೆಯ ಎಂಬುವದನ್ನು ವಿಮರ್ಶಿಸುವ ಮುನ್ನ ಸೃಷ್ಟಿಯ ಆದಿಯಲ್ಲಿ ಬ್ರಹ್ಮನನ್ನು ಕುರಿತು ನಾರಾಯಣೀಯಮ್ ಬರೆದ ನಾರಾಯಣ ಭಟ್ಟಾದಿರಿ ತಮ್ಮ ಕಾವ್ಯದಲ್ಲಿ ಕಮಲೋದ್ಭವನಾದ ಬ್ರಹ್ಮನು ಅಂಬುದಿಯಲ್ಲಿ ಕಮಲ ಎಲ್ಲಿಂದ ಬಂತು ಎಂಬುವುದುದಾಗಿ ಕುತೂಹಲದಿಂದ ನಾಲ್ಕು ದಿಕ್ಕುಗಳನ್ನು ನೋಡಿದಾಗ ಬ್ರಹ್ಮನು ಚತುರ್ಮುಖನಾದನು ಎಂಬುವುದಾಗಿ ವರ್ಣಿಸುವಾಗ-

ತದೀಕ್ಷಣ ಕುತೂಹಲಾತ್
ಪ್ರತಿದಿಶಂ ವಿವೃತ್ತಾನನಃ
ಚತುರ್ವದನ ತಾಮಗಾದ್ವಿ
ಕಸತ್ಪದೃಷ್ಟ್ಯಮ್ಬುಜಾಂ

- ಎಂಬುವುದಾಗಿ ಹೇಳಿದ್ದಾನೆ

ಆಚಾರ್ಯ ಹೃದಯಂ ದ್ರಾವಿಡ ಬ್ರಹ್ಮಸೂತ್ರ ತಿರುವಾಯ್‌ಮೊಳಿಯನ್ನು ಸಂಪೂರ್ಣವಾಗಿ ತಿಳಿಯಬೇಕಾದರೆ ಪ್ರತಿಯೊಬ್ಬರೂ ಆಚಾರ್ಯಹೃದಯವನ್ನು ಕಾಲಕ್ಷೇಪ ಮಾಡಿ ತಿಳಿದುಕೊಳ್ಳಬೇಕು ಕೋಯಿಲ್ ಮಣವಾಳಮಾಮುನಿಗಳ ವಿಸ್ತಾರವಾದ ೧೬ ನೆಯ ಸೂತ್ರವಾದ ಚತುರ್ವಿಧ ದೇಹ ವರ್ಣಾಶ್ರಮಾಧಿಕಾರ ಫಲ ಮೋಕ್ಷಸಾದನ ಗತಿ ......ಶಿಲಗಾಮ್ಯೆ ವಿರಿತ್ತದು - ಎಂಬುವುದರ ವ್ಯಾಖ್ಯಾನ ಮಾಡುವಾಗ ಚತುರ್ವಿದ ಎಂಬುವುದು ಮುಂದೆ ತಿಳಿಸಿರುವ ಎಲ್ಲಾ ಪ್ರಕರಣಗಳಿಗೂ ಅನ್ವಯಿಸಲ್ಪಡುತ್ತದೆ. ಅವು ಯಾವುದೆಂದರೆ-

೧ ದೇವ, ತಿರ್ಯಕ್, ಸ್ಥಾವರ, ಮನುಷ್ಯ ಎಂಬುವ ನಾಲ್ಕು ವಿಧವಾದ ದೇಹಗಳು

೨ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ - ಎಂಬ ನಾಲ್ಕು ವರ್ಣಗಳು

೩. ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ, ಸನ್ಯಾಸ - ನಾಲ್ಕು ಆಶ್ರಮಗಳು.

೪ ಆರ್ತ, ಅರ್ಥಾರ್ಥಿ, ಜಿಜ್ಞಾಸು, ಜ್ಞಾನಿ - ನಾಲ್ಕು ಅಧಿಕಾರಗಳು

೫. ಧರ್ಮ, ಅರ್ಥ, ಕಾಮ, ಮೋಕ್ಷ - ನಾಲ್ಕು ಪುರುಷಾರ್ಥಗಳು.

೬ ಸಾಲೋಕ್ಯ ಸಾಮೀಪ್ಯ ಸಾಯುಜ್ಯ ಸಾರೂಪ್ಯ - ನಾಲ್ಕು ವಿಧದ ಮೋಕ್ಷಗಳು

೭ ಕರ್ಮ, ಜ್ಞಾನ, ಭಕ್ತಿ, ಪ್ರಪತ್ತಿ - ನಾಲ್ಕು ಸಾಧನಗಳು.

೮ ಗರ್ಭಗತಿ, ಯಾಮ್ಯಗತಿ, ಧೂಮಾದಿಗತಿ, ಅರ್ಚಿರಾದಿಗತಿ - ನಾಲ್ಕು ಪಂಚಾಗ್ನಿವಿಧವಾದ ಗತಿಗಳು

೯. ಕೃತ, ತ್ರೇತಾ, ದ್ವಾಪರ, ಕಲಿ - ನಾಲ್ಕು ಯುಗಗಳು

೧೦ ಧ್ಯಾನ, ಯಜನ, ಅರ್ಚನ, ಸಂಕೀರ್ತನ - ನಾಲ್ಕು ಬಗೆಯ ಯುಗ ಧರ್ಮಗಳು

೧೧ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ - ನಾಲ್ಕು ಬಗೆಯ ವ್ಯೂಹಗಳು.

೧೨. ಸಿತ, ಪಿತ, ಶ್ಯಾಮ, ನೀಲ - ನಾಲ್ಕು ಬಗೆಯ ಕ್ರಿಯೆಗಳು

೧೩. ವಾಸುದೇವನಿಂದ ಉತ್ಪನ್ನರಾದ ಕೇಶವ, ನಾರಾಯಣ, ಮಾಧವರುಗಳು

೧೪ ಸಂಕರ್ಷಣನಿಂದ ಉತ್ಪನ್ನರಾದ ಗೋವಿಂದ, ವಿಷ್ಣು, ಮಧುಸೂಧನರು

೧೫. ಪ್ರದ್ಯುಮ್ನನಿಂದ ಉತ್ಪನ್ನರಾದ ತ್ರಿವಿಕ್ರಮ, ವಾಮನ, ಶ್ರೀಧರರು

೧೬. ಅನಿರುದ್ಧನಿಂದ ಉತ್ಪನ್ನರಾದ ಹೃಷೀಕೇಶ, ಪದ್ಮನಾಭ, ದಾಮೋದರರು.

೧೭. ಆಮೋದ, ಪ್ರಮೋದ, ಸಮ್ಮೋದ, ವೈಕುಂಠರೂಪವಾದ ನಾಲ್ಕು ವ್ಯೂಹಸ್ಥಾನಗಳು. - ಇಂತಹ ಚತುರ್ವಿಧವಾದ ಅರ್ಥವಿಶೇಷಗಳನ್ನು ನಾವು ನಾಲ್ಕು ವೇದಗಳಲ್ಲೂ, ನಾಲ್ಕು ಉಪವೇದಗಳಲ್ಲೂ ಕಾಣಬಹುದು. ಪ್ರಣವ ಪೂರ್ವಕ ಪ್ರಾಣಾಯಾಮವನ್ನು ಮಾಡುವಾಗ ಅಷ್ಟಾಂಗ ಯೋಗದಲ್ಲಿ ನಾಲ್ಕು ಬಗೆಯ ಕ್ರಿಯೆಗಳನ್ನು ಮನಸ್ಸಿನ ಶುದ್ಧಿಗೆ ತಿಳಿಸುವಾಗ ರೇಚಕ - ಪೂರಕ - ಕುಂಭ - ಪ್ರತ್ಯಾಹಾರ ಇವುಗಳನ್ನು ತಿಳಿಸುತ್ತಾರೆ ಶ್ರೀವೈಷ್ಣವರಿಗೆ ನಾಲಾಯಿರ ದಿವ್ಯಪ್ರಬಂಧಗಳು ಬ್ರಹಶ್ರೇಷ್ಠ, ದ್ರಾವಿಡ ವೇದಗಳೆಂದು ಕರೆಯುವ ಈ ನಾಲ್ಕು ಸಾವಿರ ಪಾಶುರಗಳು ದೇವರಿಗೆ ಬಹಳ ಇಷ್ಟ.

ಚತುರೋಪಾಗಳು ಸಾಮ, ದಾನ, ಭೇದ, ದಂಡ, ಇವುಗಳು ಪಂಚತಂತ್ರ ಹಾಗೂ ಹಿತೋಪದೇಶಗಳಲ್ಲಿ ನಾವು ಕಾಣಬಹುದು. ಸುವರ್ಣವೆಂದು ನಾಲ್ಕು ಪದಗಳ ಶ್ಲೋಕ-

ಸುವರ್ಣಸ್ಯ - ಸುವರ್ಣಸ್ಯ
ಸುವರ್ಣಸ್ಯ ಚ ಮೈಥಿಲೀಂ
ಪ್ರೇಷಿತೌ ರಾಮಚಂದ್ರೇಣ
ಸುವರ್ಣಸ್ಯಾಂಗುಳೀಯಕಂ

ಇಲ್ಲಿ ೧ ನೇ ಸುವರ್ಣಕ್ಕೆ ಶ್ರೇಷ್ಠಬಣ್ಣ ೨ ಭಂಗಾರದ್ದು ೩ ರಾಮ ಎಂಬ ಅಕ್ಷರಗಳಿಂದ ಕೂಡಿದ ೪ ಒಂದು ಅಕ್ಷ ತೂಕ ಬಂಗಾರಕ್ಕೆ ಸುವರ್ಣವೆಂದು - ಇಂತಹ ಮುದ್ರಿಕೆಯನ್ನು ಗುರ್ತಿಗಾಗಿ ಮಾರುತಿಯ ಕೈಗೆ ರಾಮನು ಕೊಟ್ಟನು ಎಂಬುವುದಾಗಿ ಅರ್ಥ. ಬ್ರಹ್ಮದೇವರು ಮೊದಲು ಸೃಷ್ಟಿಕ್ರಿಯೆಯನ್ನು ಮಾಡುವಾಗ ತಮ್ಮ ಮನಸ್ಸಿನಿಂದ ಸೃಷ್ಟಿ ಮಾಡಿದ್ದು ಸನಕ, ಸನಂದನ, ಸನಾತನ ಮತ್ತು ಸನತ್ಕುಮಾರರನ್ನು (ತಾವತ್ ಸ ಸರ್ಜಮನಸಾ ಸನಕಂ ಸನಂದಂ, ಭೂಯಃ ಸನಾತನ ಮುನಿ ಚ ಸನತ್ಕುಮಾರಂ) ಈ ನಾಲ್ಕು ಮುನಿಗಳು ವಿಷ್ಣುವಿಗೆ ಬಹು ಪ್ರಿಯರು.

ಭಗವದ್ಗೀತೆಯಲ್ಲಿ ಸ್ವಾಮಿ ಅರ್ಜುನನಿಗೆ ಭಕ್ತನು ನೀಡುವ ಈ ನಾಲ್ಕು "ಪತ್ರಂ - ಪುಷ್ಪಂ - ಫಲಂ - ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ತದಹಂ ಭಕ್ತ್ಯುಪ ಹೃತ ಮಶ್ನಾಮಿ ಪ್ರಯತಾತ್ಮನಃ" ಎಂಬುವುದಾಗಿ ಹೇಳುವಾಗ ತುಲಸೀ ಬಿಲ್ವಾದಿಗಳನ್ನೂ (ಪತ್ರ) ಪುಷ್ಪಗಳನ್ನೂ ಹಣ್ಣುಗಳನ್ನೂ ಮತ್ತು ತೀರ್ಥವನ್ನು ಯಾವ ಭಕ್ತನು ಭಕ್ತಿಯಿಂದ ಅರ್ಪಿಸುತ್ತಾನೋ ಅಂತಹ ನಿಷ್ಕಾಮ ಪ್ರೇಮಿ ಭಕ್ತನ ವಸ್ತುಗಳನ್ನು ನಾಲ್ಕನ್ನೂ ತಾನು ಸ್ವೀಕಾರ ಮಾಡುತ್ತೇನೆಂದು ಭರವಸೆ ನೀಡಿದ್ದಾನೆ. ಗೀತೆಯ ಒಂಬತ್ತನೆಯ ಅಧ್ಯಾಯದ ಕೊನೆಯ ಶ್ಲೋಕದಲ್ಲಿ ಸ್ವಾಮಿ ತನ್ನನ್ನು ಹೊಂದಬೇಕಾದರೆ ನಾಲ್ಕು ವಿಧವಾದ ಕ್ರಮಗಳನ್ನು ತಿಳಿಸುತ್ತಾನೆ "ಮನ್ಮನಾಭವ" ಎಂಬುವ ಶ್ಲೋಕದಲ್ಲಿ-

೧) ಮನ್ಮನಾಃ ಭವ - ನನ್ನಲ್ಲೇ ಅನನ್ಯ ಪ್ರೇಮದಿಂದ ದೃಢವಾಗಿ ನೆಟ್ಟ ಮನಸ್ಸುಳ್ಳವನಾಗಿ ಆಗು

೨) ಮದ್ಯಾಜೀ ಭವಮಾಂ ನಮಸ್ಕುರು - ಸರ್ವಸ್ವವನ್ನೂ ಅರ್ಪಿಸಿ ನನಗೆ ಪ್ರೇಮದಿಂದ ಭಕ್ತಿಯಿಂದ ನಮಸ್ಕಾರ ಮಾಡು. ಶರಣಾಗತನಾಗು.

೩) ಏವಂ ಮತ್ಪರಾಯಣಃ - ಈ ಪ್ರಕಾರ ನನಗೆ ಶರಣಾಗತನಾಗಿ.

೪) ಆತ್ಮಾನಂ ಯುಕ್ತ್ವಾ ಮಾಮ್ ಏವ ಏಷ್ಯಸಿ - ಆತ್ಮನನ್ನು ನನ್ನಲ್ಲಿ ಒಂದೇ ಭಾವದಿಂದ ನಿಯುಕ್ತಿಗೊಳಿಸಿದರೆ ನೀನು ನನ್ನನ್ನೇ ಸೇರುವೆ ಎಂಬುವುದಾಗಿ ನಾಲ್ಕು ಬಗೆಯ ಸಾಧನಗಳನ್ನು ಸ್ವಾಮಿ ತಿಳಿಸಿದ್ದಾನೆ ನಮ್ಮಾಳ್ವಾರರ ತಿರುವಾಯ್‌ಮೊಳಿಯಲ್ಲಿ ಹೆಚ್ಚಿನ ಪಾಶುರಗಳು ನಾಲ್ಕು ಸಾಲುಗಳ (ಪಾದಗಳ) ಪಾಶುರಗಳು. ಭಗವಂತನ ಸ್ವಾಮಿತ್ವ ಸೌಲಭ್ಯ ಸೌಶೀಲ್ಯ ವಾತ್ಸಲ್ಯಾದಿ ನಾಲ್ಕು ಗುಣಗಳನ್ನು ಸೂಚಿಸುವ ಸಲುವಾಗಿ, ಸಪ್ತಸ್ವರಗಳಲ್ಲಿ ಮಕಾರ ಲಕ್ಷ್ಮೀವಾಚಕ - ನಾರಾಯಣ - ನಾಲ್ಕು ಅಕ್ಷರಗಳ ಮಹಾಮಂತ್ರ ಲಕ್ಷ್ಮಿಯನ್ನು ಕುರಿತು ಶ್ರೀ ಯಾಮುನಾಚಾರ್ಯರು ಚತುಶ್ಲೋಕ ರಚಿಸಿದ್ದಾರೆ "ಕಾಂತಸ್ತೇ ಪುರುಷೋತ್ತಮ" ಇತ್ಯಾದಿ ಹೀಗೆ ನಾಲ್ಕರ ಮಹಿಮೆ ಚತುರ್ವಿದ ಪುರುಷಾರ್ಥಗಳ ವಿವರಣೆ ಚತುರ್ವರ್ಣಗಳ - ಆಶ್ರಮಗಳ ಧರ್ಮಗಳು, ಅಪಾರ ಅನಂತ, ಅವ್ಯಾವೃತ ಅನುಕೂಲಗಳು.

* * *

# ಕೋಪ

ಡಾ|| ಎಚ್. ವಿ. ನರಸಿಂಹ ಮೂರ್ತಿ.

ಒಮ್ಮೆ ಕೋಪ ಬಂತೆಂದು ಮೂಗು ಕೊಯ್ದುಕೊಂಡರೆ ಹತ್ತು ಸಲ ಶಾಂತಿ ಮಂತ್ರ ಪಠಿಸಿದರೂ ಅದು ಮತ್ತೆ ಚಿಗುರದು ಹಾಗೆಯೇ ಒಂದು ಕೋಪ ಬಂತೆಂದು ಬಾವಿಗೆ ಹಾರಿದರೆ ನೂರು ಕೋಪ ಬಂದರೂ ಮರಳಿ ಮೇಲೇರಲಾಗದು 'ಕೋಪವೆಂಬುದನರ್ಥಸಾಧನ' - ಎಂದು ಬಣ್ಣಿಸಲಾದ ಕೋಪದ ಬಗೆಗೆ ಎಚ್ಚರಿಸುವ ನಾಣ್ಣುಡಿಗಳು ಅನೇಕ. ಒಂದು ಕೋಪದಿಂದ ಶರೀರದಲ್ಲಿರುವ ಅದೆಷ್ಟೋ ಜೀವಕಣಗಳು ಭಗ - ಭಗನೆ ಉರಿದು ಹೋಗುತ್ತವೆ; ಅದರಿಂದ ಆಗುವ ಆಯಾಸ, ವ್ಯಾಧಿಗಳೂ ಅನೇಕ - ಎಂದು ಸಾರುವ ವಿಜ್ಞಾನವು ಅದು ಆರು ವೈರಿಗಳಲ್ಲಿ ಒಂದೆಂಬುದು ನಿಜ - ಎಂದು ಸ್ಪಷ್ಟಗೊಳಿಸಿದೆ. ಗೀತಾಚಾರ್ಯ ಶ್ರೀಕೃಷ್ಣನು ಅದನ್ನೇ

'ಕ್ರೋಧಾತ್‌ಭವತಿ ಸಮ್ಮೋಹಃ
ಸಮ್ಮೋಹಾತ್ ಸ್ಮೃತಿ ವಿಭ್ರಮಃ'
'ಸ್ಮೃತಿ ಭ್ರಂಶಾತ್ ಬುದ್ಧಿನಾಶೋ
ಬುದ್ಧಿನಾಶಾತ್ ಪ್ರಣಶ್ಯತಿ'

ಅಂದರೆ ಕ್ರೋಧದಿಂದ ವ್ಯಕ್ತಿಯೊಬ್ಬನಿಗೆ ಮಾಡಲಾಗದ ಕೆಲಸವನ್ನು ಮಾಡುವ ಆತುರ, ಅದರಿಂದ ಭ್ರಮಿತವಾಗಿ ಬುದ್ಧಿಯನ್ನು ಕಳೆದುಕೊಳ್ಳುತ್ತಾನೆ; ಬುದ್ಧಿನಾಶದಿಂದ ಅವನ ವ್ಯಕ್ತಿತ್ವದ ವಿನಾಶವಾಗುತ್ತದೆ - ಎಂದು ಹೇಳಿದ್ದಾನೆ

ಒಮ್ಮೆ ಭಗವಾನ್ ಬುದ್ಧನ ಶಿಷ್ಯನೊಬ್ಬ ಒಂದು ಮನೆಗೆ ಭಿಕ್ಷೆ ಬೇಡಲು ಹೋದ. ಭಿಕ್ಷೆ ಕೊಡಲು ಬಂದ ಮನೆಯಾತನೊಂದಿಗೆ 'ಇದು ಬೇಡ; ನಿನ್ನದು ಏನಾದರೂ ಇದ್ದರೆ ಕೊಡು' - ಎಂದು ಕೇಳಿದ. ಮನೆಯೊಡೆಯ ತಂದಿತ್ತ ಅಕ್ಕಿ, ಬಟ್ಟೆ ಪಾತ್ರೆ ಏನನ್ನೂ ಆತ ಸ್ವೀಕರಿಸಲಿಲ್ಲ 'ಇದು ಬೇಡ, ಇದು ಬೇಡ' - ಎಂದು ನಿರಾಕರಿಸಿದ 'ನಿನ್ನದು ಏನಾದರೂ ಇದ್ದರೆ ಕೊಡು' - ಎಂದು ಮತ್ತೆ - ಮತ್ತೆ ಹಠ ಹಿಡಿದ. ಮನೆಯ ಯಜಮಾನನಿಗೆ ಕೋಪ ತಡೆಯಲಾಗಲಿಲ್ಲ ಭಿಕ್ಷುವಿನ ಕೆನ್ನೆಗೆ ರಪ್ಪನೆ ಬಾರಿಸಿ 'ಮೂರ್ಖ ಇದು ನನ್ನದು, ತೆಗೆದುಕೋ' - ಎಂದ ಶಿಷ್ಯನ ಮುಖ ಅರಳಿತು 'ಸರಿ, ಸರಿ ಇದು ನಿನ್ನದೇ' ಎಂದು ಸಂತೋಷದಿಂದ ಹೇಳಿದ. ಪೆಟ್ಟು ತಿಂದರೂ ಆ ಭಿಕ್ಷು ಸಹನೆಯಿಂದ ನಿಂತುದನ್ನು ಕಂಡು ಆ ಮನೆಯೊಡನಿಗೆ ಅಚ್ಚರಿ ಆತ ಕೋಪಬಿಟ್ಟು ಶಾಂತನಾಗಿ 'ಅಯ್ಯಾ! ನಿನ್ನದು ಏನಾದರೂ ಇದ್ದರೆ ನನಗೆ ಕೊಡುವೆಯಾ?' - ಎಂದು ಕೇಳಿದ. 'ಇದೋ, ಕೊಡುತ್ತೇನೆ' - ಎಂದು ಆ ಭಿಕ್ಷು ನಿರ್ಮಲ ಸ್ನೇಹದಿಂದ ಆ ಗೃಹಸ್ಥನ ಕೆನ್ನೆಗೆ ಒಂದು ಮುತ್ತನ್ನು ನೀಡಿ 'ಜಗತ್ತಿನ ಜನರಿಗೆಲ್ಲ ನಾನು ಕೊಡುವ ನನ್ನದು ಇದೇ' - ಎಂದ.

ದೇವದೂತ ಯೇಸುವೂ ಇದನ್ನೇ ಹೇಳಿದ 'ಯಾರಾದರೂ ನಿನ್ನ ಕೆನ್ನೆಗೆ ಹೊಡೆದರೆ, ಕೋಪಗೊಳ್ಳದೆ ಆತನಿಗೆ ನಿನ್ನ ಇನ್ನೊಂದು ಕೆನ್ನೆಯನ್ನು ತೋರಿಸು' - ಎಂದು ಇದರ ಅಂತರಂಗವಿಷ್ಟೆ : ಕೋಪದಿಂದ ಕೋಪವನ್ನು ಗೆಲ್ಲಲಾಗದು ಅದನ್ನು ಗೆಲ್ಲಲು ತಾಳ್ಮೆ ಕ್ಷಮಾಶೀಲತೆಗಳು ಬೇಕು

ಕೌಶಿಕನ ಕೋಪದಿಂದ ಅರಣ್ಯದಲ್ಲಿ ಹಕ್ಕಿ ಸುಟ್ಟದ್ದನ್ನು ನಂತರ ಅವನ ಕೋಪ ಶಮನಗೊಳ್ಳುವಂತೆ ಬುದ್ಧಿಹೇಳಿದ ಶಾಂತಳಾದ ಗೃಹಿಣಿ ಹಾಗೂ ಧರ್ಮವ್ಯಾಧನ ಕಥೆಯನ್ನು ಮಹಾಭಾರತದ ಅರಣ್ಯಪರ್ವದಲ್ಲಿ ನಾವು ಕಾಣಬಹುದು

ಇಂತಹ ನಿದರ್ಶನಗಳು, ಸಾಧು - ಸಂತರ ಉಪದೇಶಗಳು ನಮ್ಮ ಮುಂದೆ ರಾಶಿ - ರಾಶಿ ಇದ್ದರೂ ಕೋಪವು ಅದೆಷ್ಟು ಮನೆಗಳ ನೆಮ್ಮದಿಯನ್ನು ಕದಡುತ್ತಿಲ್ಲ? ಗಂಡ - ಹೆಂಡರ ನಡುವೆ ಅಡ್ಡಗೋಡೆ ನಿರ್ಮಿಸಿ ಅವರ ಸುಖದಾಂಪತ್ಯವನ್ನು ಹಾಳುಗೆಡಹಿಲ್ಲ! ಕೇವಲ ಅರೆಕ್ಷಣದ ಕೋಪದಿಂದ ಜೀವಮಾನವಿಡೀ ಜೈಲುಕಂಬಿ ಎಣಿಸಿಲ್ಲ! ಪಕ್ಕದ ಮನೆಯವರು ತಮ್ಮ ಮಗನ ತುಂಟಾಟಿಕೆಯ ಬಗೆಗೆ ದೂರು ತಂದರೆಂದು ಕ್ರೋಧವಶಳಾದ ಹೆತ್ತಮ್ಮ ತನ್ನ ಕರುಳಿನ ಕುರುಡಿಯ ಮೈಮೇಲೆ ಸೀಮೆ ಎಣ್ಣೆ ಎರೆದು ಬೆಂಕಿ ಹಚ್ಚಿಲ್ಲ! ಮತ್ತೆ ಮತ್ತೆ ಬರುವ ಕೋಪವು ಶರೀರಕ್ಕೆ ಖಾಯಿಲೆಯನ್ನು ತರುವುದಂತೂ ಖಂಡಿತ

ಒಂದೇ ಕೈಯಿಂದ ಚಪ್ಪಾಳೆಯಾಗದು ಇನ್ನೊಬ್ಬರ ಕೋಪದೆದುರು ನಾವು ಶಾಂತವಾಗಿದ್ದರೆ ಅನಾಹುತವನ್ನು ತಪ್ಪಿಸಬಹುದು ಜಗತ್ತಿನ ಅಶಾಂತಿಗೆ ಕ್ರೋಧವೇ ಮೂಲ ಸತ್ಕಾರ್ಯದಿಂದ ಮನಸ್ಸಿಗೆ ನೆಮ್ಮದಿ ತಂದುಕೊಂಡರೆ, ಕ್ರೋಧಕ್ಕೆ ಎಡೆ ಇರದು ಕೋಪ ಬಂದಾಗ ಎರಡೂ ಕಿಸೆಗಳಲ್ಲಿ ಕೈತೂರಿಸಿಕೊಂಡು, ಮೊದಲು ನೂರರವರೆಗೆ ಎಣಿಸಿ, ಬಳಿಕ ಮುಂದಿನ ಕಾರ್ಯದೆಡೆಗೆ ಯೋಚಿಸಿದರೆ ಅದೆಷ್ಟೋ ಅನಾಹುತಗಳನ್ನು ತಡೆಯಬಹುದಂತೆ ಕೋಪವನ್ನು ತಣಿಸಲು ಕೆಲವರು ನೂರೆಂಟು ರಾಮನಾಮ ಜಪಿಸುತ್ತಾರೆ, ಮತ್ತೆ ಕೆಲವರು ಒಂದು ಕೊಡ ತಣ್ಣೀರನ್ನು ತಲೆಯ ಮೇಲೆ ಸುರಿದುಕೊಳ್ಳುವುದುಂಟು ಕೋಪ ಬಂದಾಗ ಕನ್ನಡಿಯ ಮುಂದೆ ನಿಲ್ಲುವುದೂ ಉತ್ತಮ ಆಗ ತನ್ನ ಸುಂದರ ಮುಖ ಅದೆಷ್ಟು ವಿಕಾರವಾಗಿ ತೋರುತ್ತದೆಂಬುದು ತನಗೇ ಕಂಡು, ಕೂಡಲೆ ಕೋಪ ಬಿಡಲು ಸಾಧ್ಯವಾಗುತ್ತದೆ

ಕೋಪವನ್ನು ಒದ್ದೋಡಿಸಿದವನಿಗೆ ಎಲ್ಲೆಡೆ ಅಂತ್ಯವಿರದ ಭಗವಂತನೇ ಕಾಣಿಸುತ್ತಾನೆ 'ವಿಗತೇಚ್ಛಾ ಭಯ ಕ್ರೋಧೋ ಯಃ ಸದಾ ಮುಕ್ತ ಏವಸಃ' - ಎಂದಂತೆ ಕೋಪಗೆದ್ದವ ದೊಡ್ಡ ಸಾಧಕ, ಅವನು ಮುಕ್ತ

* * *

## ತಿರುಪತಿಯಲ್ಲಿ ವಸತಿಗಾಗಿ ಸೂಚನೆ

ತಿರುಪತಿಯಲ್ಲಿ ವಸತಿಗಾಗಿ ಮುಂಗಡ ಕಾಯ್ದಿರಿಸುವಿಕೆಗಾಗಿ ಯಾತ್ರಿಕರು ಹಣವನ್ನು ಎಂ. ಓ. ಮೂಲಕ ಕಳುಹಿಸುವುದನ್ನು ಸ್ವೀಕರಿಸಲಾಗುವುದಿಲ್ಲ. ಅಸಿಸ್ಟೆಂಟ್ ಎಕ್ಸಿಕ್ಯೂಟಿವ್ ಆಫೀಸರ್ (ರಿಸೆಪ್ಷನ್) ತಿ.ತಿ.ದೇ. ತಿರುಪತಿ ಅಥವಾ ಎಕ್ಸಿಕ್ಯೂಟಿವ್ ಆಫೀಸರ್ ತಿ.ತಿ.ದೇ ತಿರುಪತಿ ಇವರ ಹೆಸರಿನಲ್ಲಿ ಡಿ. ಡಿ. ಯನ್ನು ಕಳುಹಿಸಬೇಕು. ಡಿ.ಡಿ. ಯ ಜೊತೆಗೆ ಬರುವ ದಿನಾಂಕ, ಬರುವವರ ಸಂಖ್ಯೆ ತಿರುಪತಿಯಲ್ಲಿ ವಸತಿಯನ್ನು ಕಾಯ್ದಿರಿಸಬೇಕಾದ ದಿನಾಂಕಗಳನ್ನು ಬರೆದು ಕಳುಹಿಸಬೇಕು

ಅಸಿಸ್ಟೆಂಟ್ ಎಕ್ಸಿಕ್ಯೂಟಿವ್ ಆಫೀಸರ್,
(ರಿಸೆಪ್ಷನ್) ತಿ.ತಿ.ದೇ., ತಿರುಪತಿ.

# ಸ್ತೋತ್ರರತ್ನ ನಾಲ್ಕು ಪದ್ಯ

ಡಾ|| ವಿ. ಎಸ್. ಸಂಪತ್ಕುಮಾರಾಚಾರ್ಯ

ವಿರಾಜಮಾನ ಉಜ್ವಲ ಪೀತವಾಸಸಂ
ಸ್ಮಿತ ಅತಸೀಸೂನ ಸಮ ಅಮಲಚ್ಛವಿಂ
ನಿಮಗ್ನನಾಭಿಂ ತನುಮಧ್ಯಮ್ ಉನ್ನತಂ
ವಿಶಾಲ ವಕ್ಷಸ್ಥಲ ಶೋಭಿ ಲಕ್ಷಣಮ್ ೩೨

ಎಲೈ ಭಗವಂತನೇ! ನೀನು ಸ್ವತಃ ಪ್ರಕಾಶಮಾನವಾಗಿ ಹೊಳೆಯುತ್ತಿರುವ ಪೀತಾಂಬರವನ್ನು ಧರಿಸಿದವನು ಅರಳಿದ ಅಗಸೆ ಹೂವಿನ ಹಾಗೆ ನಿರ್ಮಲವಾದ ಕಾಂತಿಯುಳ್ಳವನು ಆಳವಾದ ನಾಭಿಯುಳ್ಳವನು, ತೆಳುವಾದ ಸೊಂಟವುಳ್ಳವನು, ಉನ್ನತವಾದ ಮೈಕಟ್ಟುಳ್ಳವನು, ವಿಶಾಲವಾದ ಎದೆಯಲ್ಲಿ ಶೋಭಿಸುತ್ತಿರುವ ಶ್ರೀವತ್ಸವೆಂಬ ಗುರುತುಳ್ಳವನು

ವಿವರಣೆ . ಆಚಾರ್ಯರು ಇನ್ನು ಮುಂದೆ ಭಗವಂತನ ಅತಿಶಯವಾದ ದಿವ್ಯ ಸೌಂದರ್ಯವನ್ನು ವರ್ಣಿಸುತ್ತಾರೆ ಲೋಕಪಿತಾಮಹನಾದ ಚತುರ್ಮುಖ ಬ್ರಹ್ಮನನ್ನು ಭಗವಂತನು ನಾಭಿಕಮಲದಿಂದ ಹೊರಗೆಡಹಿದನು ಆ ನಾಭಿಯನ್ನು ಒಳಗೊಂಡ ದಿವ್ಯದೇಹವನ್ನು ಆಚಾರ್ಯರು ಮೊಟ್ಟ ಮೊದಲು ವರ್ಣಿಸುತ್ತಾರೆ ವಿರಾಜಮಾನ ಉಜ್ವಲಪೀತವಾಸಸಂ - ಪ್ರಕಾಶವಾಗಿರುವ ಈಶ್ವರನ ಸಂಬಂಧದಿಂದ ಆ ಪ್ರಕಾಶವನ್ನು ಪಡೆದು ಸಂತತ ಉಜ್ವಲವಾಗಿರುವ ಪೀತಾಂಬರವನ್ನು ಧರಿಸಿರುವವನು ಎಂದು ಮೊಟ್ಟಮೊದಲನೆಯದಾಗಿ ನಿರೂಪಿಸಿದ್ದಾರೆ ಪೀತಾಂಬರವು ವಿವಾಹ ಪ್ರಕರಣದಲ್ಲಿ ಬ್ರಹ್ಮಚಾರಿಗೆ ಅತಿಮುಖ್ಯವಸ್ತು ಪರಮಾತ್ಮನು ಸದಾಪೀತಾಂಬರನಾಗಿರುವುದರಿಂದ ಪ್ರತಿಕ್ಷಣದಲ್ಲೂ ದೇರ್ಪಟ್ಟಿರುವ ಚೇತನ ರಾಶಿಯನ್ನು ಪಾಣಿಗ್ರಹಣಮಾಡಿಕೊಳ್ಳುತ್ತಾನೆ ಭಗವಂತನಿಗೆ ಪೀತಾಂಬರ ಧರತ್ವವು ಅಸಾಧಾರಣ ಲಕ್ಷಣ

ಸ್ಮಿತಾತಸೀಸೂನ ಸಮಾಮಲಚ್ಛವಿಂ - ಪರಮಾತ್ಮನ ದಿವ್ಯದೇಹದ ಕಳೆ ಶುಭ್ರವಾದುದು ಮತ್ತು ಬಿಳುಪು ಅಗಸೆ ಪುಷ್ಪದಂತೆ ಕಠೋರವೂ ಅಲ್ಲ ಮತ್ತು ವಶ್ಯವೂ ಅಲ್ಲ. ಇಂತಹ ವಿಚಿತ್ರವಾದ ಆಕರ್ಷಣೆಯುಳ್ಳ ಶರೀರ ಭಗವಂತನದು. ಇದನ್ನು ದಿವ್ಯ ಮಂಗಳ ವಿಗ್ರಹವೆನ್ನುತ್ತಾರೆ. ದಿವ್ಯವೆಂದರೆ ಆಕರ್ಷಣೆಗೆ ಕಾರಣವಾದುದು ಇದರಲ್ಲಿ ಮುಖ್ಯವಾದ ಅಂಶ ಗಮನಾರ್ಹ ಬಟ್ಟೆಯಿಂದ ವಸ್ತ್ರಧಾರಿಗೆ ಮೆರುಗು ಏರ್ಪಡುವುದಿಲ್ಲ. ಆದರೆ ಅವನು ಧರಿಸಿರುವುದರಿಂದ ಬಟ್ಟೆಗೆ ಹಿರಿಮೆ ಏರ್ಪಟ್ಟಿತು ಅಂದ ಮೇಲೆ ಭಗವಂತನ ಸ್ವರೂಪದ ಹಿರಿಮೆಗಿಂತ ವಸ್ತ್ರಧಾರಣೆಯ ಹಿರಿಮೆ ಮುಖ್ಯವಲ್ಲ ವಸ್ತ್ರವು ಒಡವೆಯ ಅಂತಸ್ತನ್ನು ಉಳ್ಳದ್ದೆಂದು ಹೇಳಬಹುದು ಆದರೆ ವಸ್ತ್ರಧಾರಿಗೆ ಅದು ಅಂತಸ್ತನ್ನು ನೀಡುವುದಿಲ್ಲ. ಕೂರೇಶರು ಹೇಳಿರುವಂತೆ ಲೋಕೇ ಗುಣಾಯತ್ತಂ ಗುಣಿತ್ವಂ - ಮನುಷ್ಯನಿಗೆ ಲೌಕಿಕದಲ್ಲಿ ಸ್ಥಾನಮಾನ ಉಳಿಯಲು ಗುಣ ಸಂಪತ್ತಿಕಾರಣ ಈಶ್ವರನ ವಿಷಯದಲ್ಲಿ ಇದು ಬೇರೆ ಗುಣಾದಿಗಳಿಗೆ ಅತಿಶಯ ತೋರಬೇಕಾದರೆ ಈಶ್ವರನ ಸಂಬಂಧದಿಂದ. ಇದು ವೈದಿಕ ದೃಷ್ಟಿ, ಅಂತೆಯೇ ಚೇತನನಿಗೆ ಅವನ ಹಿರಿಮೆ ತೋರಬೇಕಾದರೆ ಈಶ್ವರನಿಗೆ ಸೇರಿದ ವಸ್ತು ಎಂಬ ಭಾವನೆಯಿಂದ ಮಾತ್ರ ಸಾಧ್ಯ ಚೇತನನಿಂದ ಭಗವಂತನಿಗೆ ಯಾವ ಮೆರುಗೂ ಇಲ್ಲ. ಈ ಭಾವನೆಯನ್ನು ಆಚಾರ್ಯರು ಅತಸೀಪುಷ್ಪದ ಉದಾಹರಣೆಯಿಂದ ಹೊರಗೆಡವಿದ್ದಾರೆ.

ನಿಮಗ್ನನಾಭಿಂ - ಮೂರನೆಯದಾಗಿ ನಾಭಿಯ ವರ್ಣನೆ ಇದು ನಿಮಗ್ನ - ಬಹಳ ಆಳವಾಗಿದೆ. ಇದನ್ನು ಉಲ್ಲೇಖಿಸುವುದು ಭಗವಂತನ ಪ್ರಥಮ ಪುತ್ರನಾದ ಚತುರ್ಮುಖನ ಉತ್ಪತ್ತಿಸ್ಥಾನವೆಂದು ಸೂಚಿಸಲು ತನುಮಧ್ಯಂ - ಪರಮಾತ್ಮನ ಶರೀರದ ಮಧ್ಯಭಾಗವು ಲತೆಯಂತೆ ಸಣ್ಣದಾಗಿರುತ್ತದೆ. ಇದು ಉದರವನ್ನು ಸೂಚಿಸುತ್ತದೆ. ಸಮಸ್ತ ಚರಾಚರ ವಸ್ತುವನ್ನು ಉದರದಲ್ಲಿ ಅಡಗಿಸಿಕೊಂಡಿರುವ ಪರಮಾತ್ಮನು ದೊಡ್ಡ ಹೊಟ್ಟೆಯನ್ನು ಧರಿಸಲಿಲ್ಲ ಸಣ್ಣ ನಡುವಿನಲ್ಲಿ ವಿಶ್ವವೆಲ್ಲವೂ ಏಕದೇಶವಾಗಿದೆ ಇದು ಸ್ವಭಾವ.

ಉನ್ನತಂ - ಬಹಳ ಎತ್ತರವಾಗಿರುವ ಮೂಗು. ಇದು ಬಾಯಿ ಮತ್ತು ಕಣ್ಣಿನ ಮಧ್ಯೆ ಸೇತುವೆಯಂ



# ಸಪ್ತಗಿರಿ

## ಬರಹಗಾರರಿಗೆ ಸೂಚನೆ

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಆಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ ಈ ಪತ್ರಿಕೆಯಲ್ಲಿ ಪ್ರಕಟನೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು

೧) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ

೨) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ

೩) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು

೪) ಕೇವಲ ಫೋಟೋಗಳನ್ನು ಮಾತ್ರ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿವಿವರಗಳೊಂದಿಗೆ ಕಳುಹಿಸಬೇಕು

೫) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ

೬) ಗೃಹಲಕ್ಷ್ಮಿ ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು

೭) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು

ಮಿಕ್ಕ ವಿವರಗಳಿಗೆ
**ಸಂಪಾದಕರು,**
ಸಪ್ತಗಿರಿ,
ತಿ ತಿ ದೇವಸ್ಥಾನಗಳು, ತಿರುಪತಿ - 517 507,
ಚಿತ್ತೂರು ಜಿಲ್ಲೆ, ಆಂ.ಪ್ರ.

ತಿದ್ದು, ನೋಟನುಡಿಗಳಿಗೆ ದೊಡ್ಡ ಸೇತುವೆಯಂತಿರುವುದರಿಂದ, ಪರಮಾತ್ಮನನ್ನು ನೋಡಬೇಕು, ನೋಡಿದುದನ್ನು ವಾಕ್ಕದ ಮೂಲಕ ಹರಡುತ್ತಿರಬೇಕೆಂಬ ವ್ಯಾಪಾರದ್ವಯವನ್ನು ಉಳಿಸಿಕೊಳ್ಳಬೇಕೆಂಬುದರ ಸೂಚನೆ

ವಿಶಾಲ ವಕ್ಷಸ್ಥಲಶೋಭಿ ಕೌಸ್ತುಭಂ - ಇದು ಹೃದಯ ವೈಶಾಲ್ಯ, ಶ್ರೀದೇವಿಯ ವಾಸಸ್ಥಾನ, ಕೌಸ್ತುಭಮಣಿಗೆ ಆಶ್ರಯ ಶ್ರೀದೇವಿಯಂತೆ ಸದಾ ಕೌಸ್ತುಭಮಣಿಯಾಗಿ, ಭಗವಂತನ ಸಂಬಂಧದಿಂದ ಮಣಿಯಂತೆ ಶುಭ್ರವಾಗಿ ಪ್ರಕಾಶಿಸಬಲ್ಲ ಸೌಭಾಗ್ಯದೊಡನೆ ಕೂಡಿರುವ ಚೇತನನಿಗೆ ಶ್ರೀ ಸಮಾನವಾದ ಆಶ್ರಯ ಪಕ್ಷಪಾತರಹಿತವಾದ, ಸರ್ವವಸ್ತುಗಳನ್ನೂ ಏಕರೀತಿಯಾಗಿ ಕಾಣಬಲ್ಲ ಮಹಾಸೌಹಾರ್ದ ಆದ್ದರಿಂದ ಸಕಲ ಚೇತನರಿಗೂ ಏಕರೂಪದಲ್ಲಿ ಪ್ರಿಯಹಿತಕರವಾಗಿ ಉಳಿದುಕೊಂಡಿರುವ ಹೃದಯವನ್ನು ಹೊಂದಿರುವನಾದುದರಿಂದ, ಸರ್ವಪ್ರಿಯತ್ವವನ್ನು ಸೂಚಿಸುವ ಭಾವನೆಯನ್ನು ಒಳಗೊಂಡಿದೆ. ಇದು ಅವನ ದಿವ್ಯಮಂಗಳ ವಿಗ್ರಹದಲ್ಲಿ ತೋರುವ, ಸರ್ವರಿಗೂ ಆಕರ್ಷಕವಾಗಿ, ಅತಿ ಶಯ ವ್ಯಾಪಕವಾಗಿ, ನಿತ್ಯಸಂಗದ ಹಿರಿಮೆಯನ್ನು ಪ್ರಕಾಶಿಸ ಬಲ್ಲ ಭಾವವಿಶೇಷವು ಏಕರೂಪದಲ್ಲಿ ಪ್ರಕಾಶಿಸುತ್ತದೆ.

ಮತ್ತೊಂದು ವಿಷಯವೇನೆಂದರೆ, ಭಗವಂತನ ಶರೀರವು ಅಚೇತನ ಪ್ರಾಕೃತ ಶರೀರದಂತೆ ಪ್ರತಿಕೂಲವಲ್ಲ. ಅದು ಭಗವಂತನ ಸ್ವರೂಪಸ್ವಭಾವಗಳನ್ನು ಪ್ರದರ್ಶಿಸುತ್ತಾ, ಸರ್ವಾಕರ್ಷಣಭೂತವಾಗಿರುತ್ತದೆ. ಆದ್ದರಿಂದ ಅವನ ಶರೀರವು ದಿವ್ಯಮಂಗಳ ವಿಗ್ರಹ. ಅಂದರೆ ಸದಾ ಏಕರೂಪವಾಗಿ, ಎಲ್ಲರಿಗೂ ಆಕರ್ಷಕವಾಗಿ, ಆನಂದೈಕಾಸ್ಪದವಾಗಿರುವ ಪ್ರಸ್ಥಾನ ಚೇತನನಿಗೆ ಭಗವಂತನ ಶರೀರ ಎಂಬುದು ತಲೆದೋರಿದಾಗ ಈಶ್ವರನು ಪ್ರಕಾಶಿಸುತ್ತಾನೆ. ಜೀವಾತ್ಮನೂ ಸಹ ಅಪ್ರಾಕೃತ ಶರೀರದಂತೆ, ಭಗವಂತನಿಗೆ ಜೀವ್ಯಶರೀರವಾಗಿ, ಅಹಂಕಾರ ಮಮಕಾರ ರಹಿತವಾಗಿ ಸದಾ ಬೆಳಗುತ್ತದೆ. ಇದರಿಂದ ಈಶ್ವರ ತತ್ವಜ್ಞಾನ ಏರ್ಪಟ್ಟರೆ ಸರ್ವರೂ ಸರ್ವದೇಶ ಕಾಲಾವಸ್ಥೆಯಲ್ಲೂ ಮುಕ್ತರಾಗಿ ಸ್ಥಾನಮಾನಗಳನ್ನು ಪಡೆಯುತ್ತಾರೆ. ಆದರೆ ಈ ಅವಸ್ಥೆ ಮೊಟ್ಟಮೊದಲು ಕೈಹಾಕಿದ ವ್ಯಕ್ತಿ ಶ್ರೀದೇವಿಯಾದುದರಿಂದ, ಅವಳನ್ನು ಮುಕ್ತಸ್ವಭಾವ ಜನನಿ - ಮಾತೆಯೆಂದು, ಅವಳ ಪತಿಯನ್ನು ತಂದೆಯೆಂದು ಭಾವಿಸಿ, ಅವರು ಮಾತಾಪಿತೃಗಳಾಗಿದ್ದಾರೆ.

ಚಕಾಸತಂ ಜ್ಯಾಕಿಣ ಕರ್ಕಶೈಃ ಶುಭೈಃ
ಚತುರ್ಭಿಃ ಆಜಾನು ವಿಲಂಬಿಭಿಃ ಭುಜೈಃ
ಪ್ರಿಯಾ ಅವತಂ ಸ ಉತ್ಪಲ ಕರ್ಣಭೂಷಣ
ಶ್ಲಥಾಲಕ ಆಬಂಧ ವಿಮರ್ದ ಶಂಸಿಭಿಃ 33

ಶುಭಲಕ್ಷಣಗಳಿಂದ ಕೂಡಿದ ಚತುರ್ಭುಜಗಳಿಂದ ನೀನು ಪ್ರಕಾಶಿಸುತ್ತಿದ್ದೀ ಆ ಭುಜಗಳು ದರೋ ಮೊಣಕಾಲಿನವರೆಗೆ ಉದ್ದವಾಗಿವೆ ಬಿಲ್ಲಿನ ಹೆದೆಯನ್ನು ಎಳೆಯುವುದರಿಂದ ಜಿಡ್ಡು ಕಟ್ಟಿ ಒರಟಾಗಿವೆ ನಿನ್ನ ಪ್ರಿಯೆಯಾದ ಲಕ್ಷ್ಮಿಯ ಕಿವಿಯನ್ನು ಅಲಂಕರಿಸಿರುವ ಕನ್ನೈದಿಲೆ ಹೂಗಳು, ಕಿವಿಯ ಇತರ ಆಭರಣಗಳು, ಸಡಿಲವಾದ ಮುಂಗುರುಳುಗಳು ಮತ್ತು ಉಟ್ಟಿರುವ ಸೀರೆ, ಇವುಗಳ ಪದೇ ಪದೇ ತಗಲುವಿಕೆಯನ್ನು ಸೂಚಿಸುತ್ತಿವೆ

ವಿವರಣೆ ಭಗವಂತನಿಗೆ ನಾಲ್ಕು ತೋಳುಗಳು ಒಂದು ಭಾಗ ರಕ್ಷಣೆಗೆ ಸಂಬಂಧ ಪಟ್ಟದ್ದು ಮತ್ತೊಂದು ವಿನಾಶಕ್ಕೆ ಸಂಬಂಧಪಟ್ಟದ್ದು ಆದ್ದರಿಂದ ಭಕ್ತರಿಗೆ ಆಭರಣವಾಗಿಯೂ ಭಕ್ತ ದ್ರೋಹಿಗಳಿಗೆ ಆಯುಧಗಳಾಗಿಯೂ ತೋರುತ್ತದೆ. ಭಗವಂತನ ಎರಡು ಕೈಗಳಲ್ಲಿ ಅಭಯಮುದ್ರೆ ಅಂದರೆ ಭಗವಂತನು ಪಾಲಕನು ಎಂಬ ಭಾವವನ್ನು ತೋರ್ಪಡಿಸುವ ಮುದ್ರೆ. ಇನ್ನೊಂದರಲ್ಲಿ ಜನರನ್ನು ಆಕರ್ಷಿಸಲು ಏರ್ಪಟ್ಟಿರುವ, ಗದೆಯಂತೆ ಅಲುಗದೆ ಇರುವಂತೆ, ಶತ್ರುವಿಗೆ ಹೆದರದಂತಿರುವಂತೆ ಸೂಚಿಸುವ ಗದಾಗ್ರಹಣ ಮತ್ತೆರಡು ಕೈಗಳಲ್ಲಿ ಅಜ್ಞಾನವನ್ನು ವಿನಾಶಗೊಳಿಸಬಲ್ಲ ಸುದರ್ಶನ ಅಂದರೆ ಪರಿಶುದ್ಧ ಜ್ಞಾನಮುದ್ರೆ ಮತ್ತು ಕೇಳಿದ ಮಾತ್ರಕ್ಕೆ ಅಸುವನ್ನು ನೀಗಿಸಬಲ್ಲ ಭೀಕರ ಶಬ್ದಸ್ವರೂಪವಾದ ಪಾಂಚಜನ್ಯ ಇವುಗಳಿಂದ ಭಕ್ತರು ವಿರೋಧ ವಿರೋಧಿ ನಿರಾಸಕವಾದ ಸಾಮರ್ಥ್ಯಪಡೆದಿದ್ದರೂ ಭಕ್ತರಿಗೆ ಅತ್ಯಂತ ಆಹ್ಲಾದಕರವಾದ ನಿರ್ಭಯತ್ವವನ್ನು ಒದಗಿಸುತ್ತವೆ ಪ್ರಕೃತ ಇದು ವಾಸ್ತವಿಕ, ಕಲ್ಪನೆ ಅಲ್ಲ ಎಂಬುದನ್ನು ಮನಗಂಡ ಕ್ರಮ ಚಕಾಸತಂ - ದಿವ್ಯದೇಹ ಧರಿಸಿದ ಪರಮಾತ್ಮನು ಧರಿಸಿರುವ ಆಯುಧಗಳಿಂದ ತನ್ನ ಹಿರಿಮೆಯನ್ನು ತೋರಿಸುತ್ತಾನೆ

ಜ್ಯಾಕಿಣ ಕರ್ಕಶೈಃ - ಬಿಲ್ಲಿನಲ್ಲಿ ಕೈಯಿಟ್ಟು ಶತ್ರುಗಳನ್ನು ನಾಶಮಾಡಿರುವುದರಿಂದ ಹೆದೆಯನ್ನು ಎಳೆಯುವ ಕಾರ್ಯದಿಂದ ಉದ್ಭವಿಸಿದ ಬೆರಳ ಕಾರ್ಕಶ್ಯ ಕಾಣುತ್ತದೆ. ಇದು ಸ್ವರೂಪಗುಣವಲ್ಲ ವ್ಯಾಪಾರದ ಫಲವಾಗಿ ತೋರುವ ಮಾರ್ಪಾಡು

ಆದ್ದರಿಂದ ಇಂತಹ ಸಾಧು ಪರಿತ್ರಾಣದ ಕಾರ್ಯದಲ್ಲಿ ತೊಡಗಿದ ಭಗವಂತನ ಚತುರ್ಭುಜಗಳು ಶುಭೈಃ - ಜನರಿಗೆ ಪ್ರಾತಿಕೂಲ್ಯವನ್ನು ತೊಡೆದು ಹಾಕುವ ಲಕ್ಷಣವುಳ್ಳ ಮೊಳಕಾಲಿನ ವರೆಗೂ ನೀಡಬಲ್ಲ ಭುಜ ಚತುಷ್ಟಯದಿಂದ ಕೂಡಿರುವ ಸ್ವಭಾವ ಇದು ಬಹುತ್ವವನ್ನು ಪ್ರಕಾಶಿಸುತ್ತದೆ ಇದು ಭಗವಂತನ ದರ್ಶನ ಮತ್ತು ಇದಕ್ಕೆ ವಿಶೇಷಣ ಸರ್ವರಿಗೂ ಅತ್ಯಾಕರ್ಷಕವಾಗಿರುವ ಆಭರಣಾಲಂಕೃತ ವೇಷಪ್ರಸಂಗದಿಂದ ಈಗಿನ ಆಚಾರ್ಯ ಪುರುಷರಲ್ಲಿ ಕಂಡುಬರುವ ವ್ಯಾಮೋಹ ಜನಕ ಭೂಷಣ ವಸ್ತ್ರಾದಿಗಳು ಭಗವಂತನ ವೇಷವನ್ನು ಸ್ಮೃತಿಯ ಮುಂದೆ ಇಡುತ್ತವೆ ಇದರಿಂದ ಭಗವಂತನಂತೆ ತಾವೂ ಪಾಮರ ವರ್ಗಕ್ಕೆ ಸೇರಿದವರಲ್ಲ ಎಂದು ಪ್ರಕಾಶವಾಗುತ್ತದೆ

ಬಹಳ ಪ್ರಿಯಕರವಾದ ಅವತಂಸ - ಕಿವಿಯ ಮೇಲೆ ಕಂಡುಬರುವ ಆಭರಣ : ಉತ್ಪಲ ಕರ್ಣ ಭೂಷಣ - ಎರಡು ಕಿವಿಗಳಿಗೂ ಧೈರ್ಯಪ್ರಧಾನವಾದ ವಜ್ರದ ಕರ್ಣಾಭರಣ ಅದರೊಂದಿಗೆ ಅತ್ಯಾಜ್ಯವಾದ ಕೇಶಪಾಶವನ್ನು ಸೇರಿಸಿಕೊಳ್ಳಲಾಗಿದೆ. ಅಲಕಬಂಧ - ಮುಂಗುರುಳು, ಆದರಿಂದ ವಿಮರ್ದ ಯಾದಾಗಲೂ ಉಜ್ಜುತ್ತಿರುವ, ತನ್ನೂಲಕ ಶೋಭೆಯನ್ನು ಸದಾಕಾಣುವಂತೆ ಮಾಡಬಲ್ಲ ಮುಂಗುರುಳುಗಳಿಂದ ಕೂಡಿ ಹೀಗೆ ಪರಸ್ಪರ ಸಮೃದ್ಧಿದ್ಯೋತಕವಾದ ಆಭರಣಗಳಿಂದ ಶೋಭಿಸುತ್ತಿರುವ ವ್ಯಕ್ತಿ ಎಂಬುದಾಗ್ಗಿ, ಪರಮಾತ್ಮನು ನಿರ್ವಿಶೇಷವಸ್ತುವಲ್ಲ, ಅಂದರೆ ಚಿದಚಿತ್ ತತ್ವವಿಶೇಷವನ್ನು ಪಡೆದ ಏಕಮಾತ್ರ ವಿಶೇಷ್ಯ ಈ ಸಗುಣತ್ವದ ಪರಿಪಾಲನೆಯೇ ರಕ್ಷಣೆಯ ಪ್ರಕಾರ ಎಂದು ವರ್ಣಿಸಿ ಆ ಆದರ್ಶಕತ್ವಕ್ಕೆ ತುತ್ತಾಗಿ ತಮ್ಮನ್ನು ಆ ವರ್ಗದಲ್ಲಿ ಸೇರುವಂತೆ ಕರುಣಿಸಬೇಕೆಂಬ ಅಂತರ್ಗತ ಮನೋಭಾವವನ್ನು ಆಚಾರ್ಯರು ದೃಢಪಡಿಸುತ್ತಾರೆ.

ಇದರಿಂದ ಪರಮಾತ್ಮನು ಅವಶ್ಯಕ ತತ್ವವಾದರೂ ಅವನಲ್ಲಿ ಸೇರಿರುವ ಗುಣ ಪ್ರತ್ಯಕ್ಷ ಮತ್ತು ಪರೋಕ್ಷರೂಪದಲ್ಲಿರುವುವು ಅವನನ್ನು ಎಂದೆಂದಿಗೂ ಬಿಡದೇ ಇರುವಂತೆ ಆಕರ್ಷಕತ್ವ ಪ್ರಭಾವವನ್ನು ಪ್ರದರ್ಶಿಸುತ್ತಾರೆ ಇದರಿಂದ ಚೇತನ ಮತ್ತು ಅಚೇತನ ವಸ್ತುಗಳು ಭಗವದಾಭರಣ ಎಂಬ ಭಾವನೆ ಏರ್ಪಟ್ಟರೆ ಅದನ್ನು ಉಳಿಸಿಕೊಳ್ಳುವುದು ಭಗವಂತನ ಕರ್ತವ್ಯ. ಅದಲ್ಲದೆ ಅಹಂ - ಮಮಕಾರಗ್ರಸ್ತರಾಗಿ ನಾನು, ನನ್ನದು, ನನಗೆ - ಎಂಬ ಭಾವನೆಯಲ್ಲಿ ಮನಸ್ಸನ್ನು ಉಳಿಸಿಕೊಂಡಿರುವವರು ದಿವ್ಯಾಭರಣವಾದ ಶಂಖಚಕ್ರಾದಿಗಳನ್ನು ಆಯುಧಗಳನ್ನಾಗಿ ಕಂಡು ಹೆದರಿ ಹಿಂಜರಿಯುತ್ತಾರೆ ತದೀಯತ್ವವು ಬಹಳ ಮುಖ್ಯವಾದುದು

ಉದಗ್ರ ಪೀನಾಂಸ ವಿಲಂಬಿ ಕುಂಡಲ
ಅಲಕಾವಲೀ ಬಂಧುರ ಕಂಬು ಕಂಧರಂ
ಮುಖಶ್ರಿಯಾ ನ್ಯಕ್ಕೃತ ಪೂರ್ಣ ನಿರ್ಮಲ
ಅಮೃತಾಂಶು ಬಿಂಬ ಅಂಬುರುಹ
ಉಜ್ವಲ ಶ್ರಿಯಂ

ಎತ್ತರವಾಗಿಯೂ ಗಡುಸಾಗಿಯೂ ಇರುವ ಹೆಗಲ ಮೇಲೆ ಓಲಾಡುತ್ತಿರುವ ಕರ್ಣಾಭರಣಗಳಿಂದಲೂ, ಮುಂಗುರುಳುಗಳ ಸಾಲಿನಿಂದಲೂ ಸುಂದರವಾಗಿದೆ, ಶಂಖದಂತಿರುವ ನಿನ್ನ ಕುತ್ತಿಗೆ, ನಿನ್ನ ಮುಖಕಾಂತಿಯಾದರೋ ಹದಿನಾರು ಕಲೆಗಳಿಂದ ಪೂರ್ಣವಾಗಿಯೂ ನಿರ್ಮಲವಾಗಿಯೂ ಇರುವ ಚಂದ್ರ ಬಿಂಬ ಮತ್ತು ಕಮಲಗಳ ಉತ್ತಮವಾದ ಕಾಂತಿಗಳನ್ನು ಮೀರಿಸಿದೆ.

ವಿವರಣೆ ಈ ಶ್ಲೋಕದಲ್ಲಿ ಈಶ್ವರನು ಶಾರೀರಕನೆಂಬ ಶಬ್ದವಾಚ್ಯನಾಗುತ್ತಾನೆ. ಶರೀರವೆಂದರೆ ಆತ್ಮನೊಡನೆ ಅಂಟಿಕೊಂಡಿರುವ, ಸರ್ವವಿಧದಲ್ಲೂ ವಶಕ್ಕೆ ಒಳಪಟ್ಟಿರುವ ಮತ್ತು ಸರ್ವೋದ್ಯಮಗಳಲ್ಲೂ ಬಳಸುವುದಕ್ಕೆ ಅರ್ಹವಾಗಿರುವ ಮತ್ತು ಸ್ವಾರ್ಥವನ್ನು ಬಯಸದೆ ಇರುವ ತತ್ವ. ಇದರಲ್ಲಿ ಚೇತನ ಮತ್ತು ಅಚೇತನ ಎಂಬ ವಿಭಾಗವೇರ್ಪಟ್ಟಿರುವುದರಿಂದ ವೈದಿಕ ದೃಷ್ಟಿಯ ಪ್ರಕಾರ ಈಶ್ವರಸಾದೃಶ್ಯ ಬಯಸದೆ ಅವನಿಗೆ ಶರೀರವಾಗಿರುವ ಭಾಗ್ಯ ಉಳಿಸಿಕೊಳ್ಳುವುದೇ ಸಂಪ್ರದಾಯ ಅದಲ್ಲದೇ ಸಾದೃಶ್ಯಭಾಗದಿಂದ ಶರೀರತ್ವವನ್ನು ಕಡೆಗಂಡಂತೆ ಆತ್ಮದ್ವಯ ಏರ್ಪಟ್ಟು ದರ್ಶನವು ಲೌಕಿಕವಾಗುತ್ತದೆ. ಅಂದರೆ ಚೇತನನಿಗೆ ಈಶ್ವರನ ಸಹಾಯದಿಂದ ಆತ್ಮತ್ವವನ್ನು ಪೂರ್ತಿಪಡೆಯುವುದೇ ಆಗಿರುತ್ತದೆ

ಈ ಶ್ಲೋಕದಲ್ಲಿ ಭಗವಂತನ ದಿವ್ಯಶರೀರದಲ್ಲಿ ಕಂಡುಬರುವ ಅತಿಶಯವನ್ನು ಮನಗಂಡು ತನಗೂ ಅಂತಹ ಅತಿಶಯಪ್ರಾಪ್ತಿ ನಿತ್ಯವಾಗಿ ಲಭಿಸದೇಕೆಂಬ ಬಯಕೆಯೇ ವೈದಿಕ ದೃಷ್ಟಿಯಲ್ಲಿ ಚೇತನನಿಗೆ ನಿಗದಿಯಾಗಿರುವ ನಿಲುವು ತಾನು ಭಗವಂತನಿಗೆ ಶರೀರವಾಗಿ ಉಳಿದುಕೊಂಡುಬಾಳಬೇಕು ಆದ್ದರಿಂದ ಶರೀರತ್ವ ಭಾವಕ್ಕೆ ಅನುಗುಣವಾಗಿ ಚೇತನನ ವ್ಯಾಪಾರಗಳೆಲ್ಲಾ ಇರಬೇಕು ಮತ್ತು ಆತ್ಮನೊಡನೆ ಅಗಲಿಕೆ ಕ್ಷಣ ಮಾತ್ರವೂ ಏರ್ಪಡಕೂಡದು ಎಂಬ ವೇದಾಂತ ಮರ್ಮವನ್ನು ಈ ಶ್ಲೋಕದಲ್ಲಿ ವಿವರಿಸುತ್ತಾರೆ ಭಗವಂತನ ದಿವ್ಯ ಶರೀರವು ಇರುವ ಲಕ್ಷಣವು ಅತ್ಯದ್ಭುತವಾದ ಆಕೃತಿ. ರಕ್ಷಕನಾದುದರಿಂದ ಅವನ ದರ್ಶನವು ಅತ್ಯದ್ಭುತವಾದ, ಪರಮವಿಲಕ್ಷಣವಾದ ಆಕರ್ಷಕತ್ವವನ್ನು ತೋರಿಸುತ್ತದೆ

ಉದಗ್ರ ಪೀನಾಂಸ ವಿಲಂಬಿ ಕುಂಡಲ - ಭಗವಂತನ ಕಿವಿಗಳಲ್ಲಿ ಕುಂಡಲಗಳು ಮತ್ತು ಮುಂಗುರುಳಿನ ಕದಂಬವು ಕೂಡಿಕೊಂಡಿರುವುದರಿಂದ ಭಗವಂತನ ಕತ್ತು ಶಂಖದಂತೆ ಅನುಪಮವಾಗಿದೆ. ಇದರಲ್ಲಿ ಭಗವಂತನ ಮುಂಗುರುಳಿನ ಕಾಂತಿ ಕರ್ಣಾಭರಣದವರೆಗೆ ಸೇರಿಕೊಂಡು ಅದಕ್ಕೆ ಆಶ್ರಯವಾದ ಕತ್ತನ್ನು ತೋರಿಸಿರುವುದರಿಂದ ಆಕರ್ಷಣೆ, ಧಾರಣೆ ಮತ್ತು ಸೌಂದರ್ಯ - ಇವು ಒಟ್ಟುಗೂಡಿ ರಾರಾಜಿಸುತ್ತವೆ ಆದ್ದರಿಂದ ಸಂಘದಲ್ಲಿ ಸೌಂದರ್ಯ ಆ ಕಾರಣ, ಸರ್ವವೂ ಭಗವಂತನ ನಿರಂಕುಶ ಸೌಂದರ್ಯವನ್ನು ತೋರಿಸುವುದಕ್ಕಾಗಿ ಪ್ರತಿ ಅಂಶವೂ ಹೊಂದಿಕೊಂಡಿರುವುದು ಗೋಚರವಾಗುತ್ತದೆ. ಭಗವಂತನ ಸೌಂದರ್ಯಕ್ಕೆ ಉಪಮಾನವೇ ಇಲ್ಲದಿರುವುದರಿಂದ ಅವನ ಶರೀರವೂ ಅವಯವಗಳೂ ನಿರುಪಮ ಶ್ಲಾಘೆಯನ್ನು ಅವನ ಸಂಬಂಧದಿಂದ ಪಡೆಯುತ್ತವೆ ಎಂಬುದು ತತ್ವ ರಹಸ್ಯ

ಈ ಆಭರಣ ವಿಶೇಷಗಳಿಂದ ಭಗವಂತನಿಗೆ ಅತಿಶಯ ಪ್ರಾಪ್ತಿ ಎಂಬ ಭಾವನೆ ಲೌಕಿಕ ಮಟ್ಟದ್ದು. ಇದಕ್ಕೆ ಕಾರಣ ಭಗವಂತನಿಗೆ ಅತಿಶಯವನ್ನು ಅವನ ಅಧೀನವಸ್ತುಗಳು ತೋರಿಸಬೇಕಾಗುತ್ತದೆ. ಆದರೆ ಅವುಗಳೆಲ್ಲ ಅವನ ಸೃಷ್ಟಿ. ಅವನಿಗೆ ಸ್ವತಃ ಇಲ್ಲದಿರುವ ಯಾವ ಅತಿಶಯವನ್ನೂ ಉಂಟುಮಾಡಲಾರವು. ಈ ಕಾರಣದಿಂದ ಭಗವಂತನ ಶರೀರವು ಅವನ ವೈಭವವನ್ನು ತೋರಿಸುತ್ತದೆ. ಅಂದರೆ ಅವನಿಗೆ ಸಂಬಂಧಿಸಿದ ವಸ್ತುಗಳೆಲ್ಲ ಅವನಿಗೆ ಹೊಂದಿಕೊಂಡು ಆ ಸಂಬಂಧದ ಮೂಲಕ ತಮ್ಮ ತಮ್ಮ ಶ್ಲಾಘ್ಯತೆಯನ್ನು ಪ್ರಕಾಶಿಸುತ್ತದೆ. ಪರಾಶರಭಟ್ಟರು ಶ್ರೀರಂಗನಾಥನಿಗೆ ಚೇತನೋಜ್ಜೀವನ ವ್ಯಾಪಾರದಲ್ಲಿ ಪುರೋಹಿತರಾದುದರಿಂದ ಪುರೋಹಿತನ ಮುಖ್ಯ ಕರ್ತವ್ಯ ಸಂಬಂಧಾತ್ ಸ್ವಾತ್ಮಲಾಭಃ ನತು ಕವಳರತಃ. ಅವನಂತೆ ಯೋಗ್ಯತೆ ಸಂಪಾದಿಸಿಕೊಳ್ಳುವುದು ದುಸ್ತರ ಆದರೆ ಅವನ ಸಂಬಂಧ ಉಳಿಸಿಕೊಂಡರೆ ಸರ್ವತೋಮುಖವಾದ ಸ್ವಾಭಾ

ವಿಶ ಸ್ವರೂಪವು ಸಹ ಉಜ್ಜ್ವಲವಾಗಿ ಪ್ರಕಾಶವಾಗುತ್ತದೆ. ಆತ್ಮನಿಗೆ ಆಶ್ರಿತವಸ್ತುಗಳಲ್ಲಿ ಆಧಾರ ವಸ್ತುವಿನ ಸಂಪರ್ಕದಿಂದ ಸುರುಗು ಏರ್ಪಡುತ್ತದೆ ಎಂಬ ಭಾವನೆಯನ್ನು ಆಚಾರ್ಯರು ಈ ಶ್ಲೋಕದ ಮೂಲಕ ಸೂಚಿಸುತ್ತಾರೆ.

ಇದು ಭಗವಂತನ ಮಂಗಳವಿಗ್ರಹದ ಪ್ರಭಾವ. ಇದರಿಂದ ಭಗವಂತನನ್ನು ಕಂಡ ವಸ್ತುವಲ್ಲಿ, ಕಂಡ ಮಾತ್ರಕ್ಕೆ ಆಕರ್ಷಣೆಯಾಗಿ ಮತ್ತೊಂದನ್ನು ಲೆಕ್ಕಿಸದೆ ಭಗವದಧೀನವಾಗಿಯೇ ಇರುವ ಮನೋಭಾವವನ್ನು ಹೊಂದುತ್ತಾರೆ. ಸಕಲ ವ್ಯಕ್ತಿಗಳಿಗೂ ಈಶ್ವರಾನುಭವವು ಸಾಧಾರಣವಾದುದರಿಂದ ಪರಸ್ಪರ ವೈಷಮ್ಯಕ್ಕೆ ಲೇಶವೂ ಅವಕಾಶವಿಲ್ಲದೆ ಸೌಹಾರ್ದವಲ್ಲಿ ಶ್ರೇಷ್ಠವಾಗಿ ಇರುತ್ತದೆ. ಇದು ಭಗವದಾಕರ್ಷಣತತ್ವದ ಪ್ರಭಾವ. ಇಂದಮೇಲೆ ಪರಮಾತ್ಮನ ವಿಷಯದಲ್ಲಿ ಜೀವಾತ್ಮನೂ ಸಹ ಶರೀರಭಾವವನ್ನು ತಳೆಯುತ್ತಾನೆ ಎಂಬ ವೈದಿಕ ನುಡಿ ನಿರರ್ಥಕವಾಗುವುದಿಲ್ಲ. ಇದ್ದರಿಂದ ತದ್ವತ್ ಭಗವಂತನಂತೆಯೇ ತದೀಯತ್ವವೂ ಸಹ ಭಗವಂತನ ಪ್ರಸಾದದಿಂದ ಏರ್ಪಡುವ ಅತಿಶಯ ಸರ್ವಥಾ ಶ್ಲಾಘನೀಯ. ಇದು ಭಗವಂತನ ದಿವ್ಯಾರವಿಂದದ ಸ್ವಭಾವ. ಇದು ಭಗವಂತನ ಐಶ್ವರ್ಯವನ್ನು ಅಂದರೆ ಈಶ್ವರ ತತ್ವವನ್ನು ಪ್ರಕಟಿಸುತ್ತದೆ. ಪರಮಾತ್ಮನು ಭಯಜನಕನಲ್ಲ. ಆಹ್ಲಾದಕರನಾದ ಆಕರ್ಷಕನೆಂಬ ಎಂಬ ಭಾವನೆ ಮೂಡಿ ಅವನನ್ನು ಬಿಟ್ಟಿರಲಾರದೆ ಇರುವುದಕ್ಕೆ ಇದು ಉಪಕ್ರಮವಾಗುತ್ತದೆ. ಇದು ವಿಶಿಷ್ಟತ್ವ ಸಮಸ್ತ ವಸ್ತುಗಳೂ ಭಗವದೀಯವಾದುದರಿಂದ ಅವುಗಳಲ್ಲಿ ಗೌರವ ಭಾವ ಬಿಟ್ಟು ಮತ್ತೊಂದು ಭಾವವನ್ನು ಬೆಳೆಸಕೂಡದು ಈ ತತ್ವವನ್ನು ಕಂಡುಕೊಂಡು ಅದರಂತೆ ಬಾಳಿದ ಅಸುರವಂಶದ ಭಕ್ತ ಪ್ರಹ್ಲಾದನಲ್ಲಿ ಸರ್ವವಿಧದಲ್ಲೂ ಕಾಣಬಹುದು.

ಪ್ರಬುಧ ಮುಗ್ಧಾಂಬುಜ ಚಾರು ಲೋಚನಂ
ಸವಿಭ್ರಮ ಭ್ರೂಲತಂ ಉಜ್ವಲಾಧರಂ
ಶುಚಿಸ್ಮಿತಂ ಕೋಮಲ ಗಂಡಮ್ ಉನ್ನಸಂ
ಲಲಾಟ ಪರ್ಯಂತ ವಿಲಂಬಿತಾಲಕಂ

ಚೆನ್ನಾಗಿ ಅರಳಿ ಸುಂದರವಾಗಿರುವ ಕಮಲಗಳಂತೆ ಮನೋಹರವಾದ ಕಣ್ಣುಗಳು, ನಲಿದಾಡುವ ಲತೆಗಳಂತಿರುವ ಹುಬ್ಬುಗಳು, ಪ್ರಕಾಶಮಾನವಾದ ಕೆಳದುಟಿ, ದಳಗುವ ಮೆಲ್ನಗು, ಕೋಮಲವಾದ ಕೆನ್ನೆಗಳು, ಉದ್ದವಾದ ಮೂಗು, ಹಣೆಯವರೆಗೆ ತೂಗಿಬಂದಿರುವ ಮುಂಗುರುಳು ಇವುಗಳಿಂದ ನೀನು ಕೂಡಿದ್ದೀಯೆ.

ವಿವರಣೆ . ಈ ಶ್ಲೋಕದಲ್ಲಿ ಭಗವಂತನ ದಿವ್ಯ ಮಂಗಳ ವಿಗ್ರಹದ ಅವಯವ ಶೋಭೆ ಕಾಣುತ್ತದೆ. ಭಗವಂತನಿಗೆ ಆತ್ಮಸ್ವರೂಪ ಒಂದು. ಅಂತೆಯೇ ದೇಹಸ್ವರೂಪ ಮತ್ತೊಂದು ಮೊದಲನೆಯ ದಾದರೆ ಪರಮಾತ್ಮನಿಗೂ ಜೀವಾತ್ಮನಿಗೂ ಭೇದ ತೋರುತ್ತದೆ. ದೇಹಸ್ವರೂಪವಾದರೆ ಅಚೇತನಕ್ಕೂ ಪರಮಾತ್ಮನ ದಿವ್ಯಶರೀರಕ್ಕೂ ಭೇದ ತೋರುತ್ತದೆ. ಎರಡು ದೃಷ್ಟಿಗಳಲ್ಲೂ ಚಿತ್, ಅಚಿತ್, ಸಾದೃಶ್ಯ ಚಿತ್ ಅಚಿತ್ ವೈಲಕ್ಷಣ್ಯಭಾಸವಾಗುತ್ತದೆ. ಪರಮಾತ್ಮನಿಗೆ ಸಂಬಂಧ ಪಟ್ಟರೆ ಸರ್ವವೂ ಪರಿಶುದ್ಧವೂ ಆಕರ್ಷಕವೂ ಆಗಿರುತ್ತದೆ. ಹಾಗಲ್ಲದೆ ಸಾದೃಶ್ಯ ಭಾವದಿಂದ ಚಿತ್ ಅಚಿತ್ ಪ್ರಕಾರಗಳನ್ನು ಕಂಡರೆ ಎರಡೂ ಹೇಯವಾಗುತ್ತದೆ. ಈಶ್ವರನ ವಿಷಯದಲ್ಲಿ ಚಿದಚಿತ್ ದರ್ಶನ ಅತ್ಯಮೂಲ್ಯವಾದುದು. ಈಶ್ವರನ ಸಂಪರ್ಕ ಏರ್ಪಟ್ಟರೆ ಸರ್ವವೂ ಶೋಭನಕರ, ಸುಂದರ, ಈ ಕಾರಣದಿಂದ ದರ್ಶನದ ಸಾರಪ್ರಕಾಶಕ್ಕೆ ಬರುತ್ತದೆ. ಚಿದಚಿತ್ ವಸ್ತುಗಳು ಭಗವಂತನಂತೆಯೇ ಕೂಡಿಕೊಂಡಿದ್ದರೂ, ಆ ಸಹವಾಸ ನಿತ್ಯವಲ್ಲ, ಏಕರೂಪವಲ್ಲ, ಸುಖಮಯವಲ್ಲ, ಅದೇ ಸಂಸಾರ. ಈ ಸಂಗದಿಂದ ಬಿಡುಗಡೆ ಹೊಂದುವುದೇ ಗುರಿಯಾಗಿರುತ್ತದೆ.

ಚೇತನನ 'ಅಹಂ' - ಅಚೇತನನ 'ಮಮ' ಕೂಡಿದರೆ ಇದು ಕೇವಲ ದುಃಖ ಜನಕ. ದುಃಖ ವಿರಹಿತವಾದ ಸುಖಮಯಸ್ಥಿತಿಯನ್ನು ಅನುಭವಿಸದೇ ಕಾದರೆ ಚೇತನ ಮತ್ತು ಅಚೇತನವು ಈಶ್ವರತತ್ವದ ಸಂಗವನ್ನು ಪಡೆದೇ ತೀರಬೇಕು ಈಶ್ವರ ಸಂಬಂಧವಾದ ಅಚೇತನವು ಪ್ರತಿಯೊಂದು ಅಂಶದಲ್ಲೂ ಆಕರ್ಷಮಯವಾಗಿದ್ದೀತೇ ಹೊರತು ತಾಟಸ್ಥಕ್ಕೂ ತ್ಯಾಗಕ್ಕೂ ಅವಕಾಶವೇ ನೀಡುವುದಿಲ್ಲ ನಾರಾಯಣ ಎಂಬ ಪದವನ್ನು ಅರ್ಥಮಾಡಿಕೊಳ್ಳಬಹುದಾದರೆ ನಾರವರ್ಗಕ್ಕೆ ಸೇರಿದ ಚೇತನ, ಅಚೇತನವು ಸರ್ವಥಾ ದುಃಖಕ್ಕೆ ಭಾಗಿಯಾಗಬೇಕು. ಅಯನ ನೊಂದಿಗೆ ಸೇರಿದರೆ ಇವುಗಳಿಗೆ ಸಮೃದ್ಧಿ, ತ್ಯಾಜ್ಯಾಂಶವಿರುವುದಿಲ್ಲ ಅಯನನು, ನಾರನೊಡನೆ ಸೇರಿದರೆ, ಅವನಿಗೆ ಆ ಸಂಬಂಧದಿಂದ ಯಾವ ಲೋಪವೂ ಏರ್ಪಡುವುದಿಲ್ಲ. ಅವನ ಸಂಬಂಧದಿಂದ ನಾರವರ್ಗದಲ್ಲಿ ನ್ಯೂನತೆ, ದೋಷ ಉಳಿಯುವುದಿಲ್ಲ. ಇದನ್ನು ಕಂಡೇ ಭಗವಂತನ ಸ್ವರೂಪವು - ಹೇಯ ಪ್ರತ್ಯನೀಕ - ಕೊಳಕನ್ನು ತೊಡೆದುಹಾಕುವ ಗುಣ, ಕಲ್ಯಾಣೈಕತಾನ - ಶುದ್ಧಿಯನ್ನು ಎಲ್ಲಕ್ಕೂ ಹಂಚುವುದು ಭಗವಂತನ ದಿವ್ಯ ದೇಹಾತ್ಮ ಸಂಗದಿಂದ ಪ್ರಕಾಶಪಡಿಸುತ್ತಾನೆ. ಈ ಕಾರಣದಿಂದ ಭಗವಂತನಿಗೆ ಸೇರಿದ ತದಾತ್ಮೀಯವಾದ ಅಚೇತನ ಪದಾರ್ಥವು ಸರ್ವಾಕರ್ಷಕವಾಗಿರುತ್ತದೆ.

ಪ್ರಕೃತಿಯಲ್ಲಿ ಅಡಗಿರುವ ಅಚೇತನ ವಸ್ತುಗಳಿಗೆ ಶುದ್ಧಿಯೋಗ ಏರ್ಪಡುವಲ್ಲಿ ಸಂಬಂಧ ನಿಮಿತ್ತವಾದ ಅಧೀನತೆಯೇ ಕಾರಣ ಸಂಸಾರದಲ್ಲಿ ಚೇತನನು ಕೂಡಿ ಕೆಡುತ್ತಾನೆ. ಮುಕ್ತಿಯಲ್ಲಿ ಕೂಡಿ ಬಾಳುತ್ತಾನೆ. ಈಗ ಭಗವಂತನ ದಿವ್ಯದೇಹದಲ್ಲಿ ಸೇರಿಕೊಂಡಿರುವ ಅನೇಕ ಭಾಗಗಳು ಕೂಡಿಕೊಂಡು ಭಗವಂತನ ಮಿರುಗನ್ನು ಪ್ರಕಾಶಿಸುತ್ತವೆ. ಆದ್ದರಿಂದ ವಿವೇಕ ಪೂರ್ವಕವಾದ ಕೂಡಿಕೆಯು ಸೌಭಾಗ್ಯ, ವಿವೇಕ ಶೂನ್ಯತೆಯಲ್ಲಿ ಈ ಕೂಡಿಕೆಯು ಕೇವಲ ದುಃಖ ಜನಕ ಎಂಬುದನ್ನು ಆಚಾರ್ಯರು ಈ ಶ್ಲೋಕದಲ್ಲಿ ಸೂಚಿಸಿದ್ದಾರೆ.

* * *

## ಧ್ವನಿವರ್ಧಕಗಳ ವಿತರಣೆ

ಹೊಸದಾದ ದೇವಾಲಯಗಳಿಗೆ ಕಾರ್ಯಕ್ರಮ ಪ್ರಚಾರಕ್ಕಾಗಿ ರಿಯಾಯಿತಿ ದರಗಳಲ್ಲಿ ನೀಡುವ ಧ್ವನಿವರ್ಧಕಗಳ ಬೆಲೆಯನ್ನು ರೂ. 3480/- ಎಂದು ನಿರ್ಧರಿಸಲಾಗಿದೆ. ಹರಿಜನ ವಾಡೆಗಳಲ್ಲಿರುವ ಎಸ್.ಟಿ., ಎಸ್.ಸಿ. ದೇವಾಲಯಗಳಿಗೆ ಈ ದರ ರೂ. 700/- ಆಗಿದ್ದು ಈ ದರಗಳು ಈಗ ಜಾರಿಯಲ್ಲಿವೆ.

ಆಲಯಗಳಿಗಾಗಿ ಧ್ವನಿವರ್ಧಕಗಳನ್ನು ಬಯಸುವವರು ಸ್ಥಳೀಯ ಮುಜರಾಯಿ ಇಲಾಖಾ ಅಸಿಸ್ಟೆಂಟ್ ಕಮೀಷನರ್ ಅವರ ಮೂಲಕ ಅರ್ಜಿಗಳನ್ನು ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರಿಗೆ ಕಳುಹಿಸಬೇಕು.

ತಿ.ತಿ.ದೇ.

# ಕುಂಕುಮ

- ವಿದ್ವಾನ್ ಕಸ್ತೂರಿ ರಂಗರಾಜನ್.

ಅನಾದಿ ಕಾಲದಿಂದಲೂ ಸಕಲ ಭಾರತೀಯರು ಅರಿಶಿನ, ಅರಿಶಿನದ ಪುಡಿ ಮತ್ತು ಅರಿಶಿನದಿಂದ ತಯಾರಿಸಲ್ಪಟ್ಟ ಕುಂಕುಮ - ಇವುಗಳನ್ನು ಮಂಗಳ ವಸ್ತುವಾಗಿ ಅಂಗೀಕರಿಸಿ ತಮ್ಮದೇ ಆದ ವಿಶಿಷ್ಟ ಸ್ಥಾನವನ್ನು ಕೊಟ್ಟಿರುತ್ತಾರೆ ಈ ದ್ರವ್ಯಗಳಿಲ್ಲದೇ ಯಾವುದೇ ಶುಭದ ಅಥವಾ ಅಶುಭದ ಕೆಲಸವು ನಡೆಯಲಾರದು ಎಂಬುದು ಭಾರತೀಯರೆಲ್ಲರ ನಂಬಿಕೆ ಪ್ರಾಕೃತಿಕವಾಗಿ ಗೆಡ್ಡೆ ಗೆಣಸಿನಂತೆ ಬೆಳೆಯುವ ಈ ಅರಿಶಿನವು ಹಳದಿ ಬಣ್ಣದಿಂದ ಕೂಡಿರುತ್ತದೆ. ಇಲ್ಲಿ ಕುಂಕುಮವನ್ನು ಧಾರ್ಮಿಕ ಹಾಗೂ ಸಾಮಾಜಿಕ ದೃಷ್ಟಿಕೋನದಲ್ಲಿ ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ

ಧಾರ್ಮಿಕ ದೃಷ್ಟಿಕೋನ . ಈ ಅರಿಶಿನವನ್ನು ಇತರ ಮಂಗಳ (ರಾಸಾಯನಿಕ) ದ್ರವ್ಯಗಳೊಂದಿಗೆ ಸೌಶೀಲ್ಯವತಿಯಾದ ಸುಮಂಗಲಿಯಾದವಳು, ಶುದ್ಧಮನಸ್ಕಳಾಗಿ, ವ್ರತೋಪಾಸನೆ ಮಾಡಿ, ಹುಣ್ಣಿಮೆಯನ್ನು ಮುಂದಾಗಿ ಇಟ್ಟುಕೊಂಡು, ತಿಥಿ, ವಾರ, ನಕ್ಷತ್ರ, ಯೋಗ, ಕರಣಗಳಲ್ಲಿ ಶ್ರೇಷ್ಠವಾದ ದಿನ ಹಾಗೂ ವೇಳೆಯಲ್ಲಿ ತಯಾರಿಸಿದ ಪುಡಿಯೇ ಕುಂಕುಮವಾಗುವುದು ಈ ಕುಂಕುಮ ತಯಾರಿಸುವಾಗ ಅತ್ಯಂತ ಭಕ್ತಿ ಶ್ರದ್ಧೆಯಿಂದ, ಯಾವುದೇ ರೀತಿಯ ಕೆಟ್ಟ ಆಲೋಚನೆ ಮತ್ತು ಮಾತುಗಳನ್ನಾಡದೇ, ದೈವೀಭಾವದಿಂದ ತಯಾರಿಸಿದರೆ, ಆ ಕುಂಕುಮಕ್ಕೆ ತನ್ನದೇ ಆದ ದೈವೀ ಶಕ್ತಿಯು ಕೂಡಿಬರುತ್ತದೆ ಈ ಕುಂಕುಮವು ಕೆಂಪು ಬಣ್ಣದ್ದಾಗಿರುತ್ತದೆ.

ಮನೆಗೆ ಅಷ್ಟೈಶ್ವರ್ಯವನ್ನು ಕೊಡುವ ಸೌಭಾಗ್ಯ ಲಕ್ಷ್ಮಿಯನ್ನು ಈ ಕುಂಕುಮದಿಂದ ಪೂಜಿಸಿ ಆ ದೇವಿಗೆ ಪ್ರಿಯವಾದ ಕೆಂಪು ತಾವರೆ ಹೂವಿನಿಂದ ಅರ್ಚಿಸಿದರೆ ಸಕಲ ಸಂಪತ್ತನ್ನೂ ಪಡೆಯುವೆವೆಂಬ ಭಾರತೀಯರ ನಂಬಿಕೆ ಅಚಲವಾದುದು ಕೆಂಪು ವರ್ಣದ ಕುಂಕುಮವು ಶತ್ರುನಾಶನದ ಸಂಕೇತ ಭೂತ ಪ್ರೇತ, ಪಿಶಾಚ, ಬ್ರಹ್ಮರಾಕ್ಷಸ, ಯಕ್ಷ ಯಮಧೂತ, ಶಾಕಿನೀ, ಡಾಕಿನೀ, ಸರ್ಪಿಶ್ವಾಪದ - ಇವೇ ಮೊದಲಾದ ಸರ್ವದೋಷಗಳ ನಿವಾರಣೆಗೆ ಅತ್ಯಂತ ಸಹಕಾರಿ ಆದ್ದರಿಂದಲೇ ಗ್ರಾಮ ದೇವತೆಗಳಾದ ಮಾರಿಯಮ್ಮ ಮಸಣಮ್ಮ ಕಾಳಿಯಮ್ಮ ದುರ್ಗಾದೇವಿ ಮುಂತಾದ ದೇವತೆಗಳಿಗೆ ಕೆಂಪು ವಸ್ತ್ರ ಧರಿಸಿ, ಕೆಂಪು ಹೂವುಗಳನ್ನು ಮುಡಿಸಿ, ಕುಂಕುಮದಿಂದ ವಿಶೇಷ ಪೂಜಾದಿಗಳನ್ನು ನಡೆಸುವ ವಾಡಿಕೆ ಇಂದಿಗೂ ಇದೆ ಇದರಿಂದ ಗ್ರಾಮವಾಸಿಗಳು ಮತ್ತು ಜಾನುವಾರುಗಳು ರೋಗರುಜಿನಗಳಿಲ್ಲದೇ, ಕ್ಷಾಮ ಡಾಮರಗಳನ್ನು ಕಾಣದೇ, ಕಾಲಕಾಲಕ್ಕೆ ಮಳೆ, ಬೆಳೆಯಾಗಿ ಸುಕ್ಷೇಮದಿಂದಿರುತ್ತಾರೆ ಎಂಬುದು ಅಂದಿನಿಂದ ನಡೆದು ಬಂದ ನಂಬಿಕೆಯಾಗಿದೆ ಈ ಕುಂಕುಮವು ಕೆಟ್ಟ ಜನಗಳ ಕ್ರೂರ ದೃಷ್ಟಿಯಿಂದ ತಪ್ಪಿಸಿಕೊಳ್ಳಲು, ಬೀದಿಯಲ್ಲಿ, ಹಾದಿಯಲ್ಲಿ ಹೋಗುವವರ, ವಿಧವಾಸ್ತ್ರೀಯರ, ಬಾಣಂತಿಯರ, ಬಂಜೆಯರ ಕಣ್ಣುಗಳು ಬೀಳುವುದನ್ನು ತಡೆಯುತ್ತದೆ

ಕೆಂಪುವರ್ಣದ ಈ ಕುಂಕುಮವು ವಿಜಯದ ಸಂಕೇತ ತನ್ನ ರಾಜನ ವಿಜಯಪ್ರಾಪ್ತಿಗೆಂದು ಮಹಾರಾಣಿಯು ವ್ರತಾಸಕ್ತಳಾಗಿ ವಿಶೇಷ ಪೂಜೆ ಕೈಗೊಂಡು ರಾಜರು ವಿಜಯಯಾತ್ರೆಗೆ ಹೊರಡುವಾಗ ತಾನು ಪೂಜಿಸಿದ ದೇವೀ ಪ್ರಸಾದವಾಗಿ ಕುಂಕುಮದ ತಿಲಕವಿಟ್ಟು ಹಾರೈಸಿ ಕಳುಹಿಸುವುದರೊಂದಿಗೆ ಆ ರಾಜನ ರಾಜ್ಯಕ್ಕೊಳಪಟ್ಟ ಸಕಲ ಪ್ರಜೆಗಳೂ ತಮ್ಮ ತಮ್ಮ ಇಷ್ಟದೇವತೆಗಳನ್ನು ತಮ್ಮ ಮತಾನುಸಾರ ಪೂಜಿಸಿ ರಾಜನ ಶ್ರೇಯಃ ಪ್ರಾರ್ಥನೆಯನ್ನು ಸಲ್ಲಿಸುವುದು ಪ್ರಾಚೀನಕಾಲ ನಡೆದುಬಂದ ಪದ್ಧತಿಯಾಗಿದೆ

ಸನಾತನ ಧರ್ಮವು ಸ್ತ್ರೀಯರಿಗೆ ಕೆಲವು ಕಟ್ಟಳೆಗಳನ್ನಿಟ್ಟು ಅದಕ್ಕೆ ಅಪೂರ್ವವಾದ ಫಲವನ್ನು ತಿಳಿಸುತ್ತದೆ

ಯಾವ ಸ್ತ್ರೀಯರು ಸೂರ್ಯೋದಯದ ವೇಳೆಗೆ ಸರಿಯಾಗಿ ಪೂರ್ವದ ದಿಕ್ಕನ್ನು ನೋಡಿ ಹಣೆಯಲ್ಲಿ ಕುಂಕುಮವನ್ನಿಟ್ಟುಕೊಳ್ಳುವರೋ ಅವರಿಗೆ ಮಾಂಗಲ್ಯ ಭಾಗ್ಯವೂ ತನ್ನ ಗಂಡನಿಗೆ ವೀರತ್ವವೂ, ಕೀರ್ತಿಯೂ ಸಕಲೈಶ್ವರ್ಯವೂ ಸಿದ್ಧಿಸುವುದು

ಯಾವ ಸ್ತ್ರೀಯರು ಸೂರ್ಯೋದಯದ ವೇಳೆಗೆ ಸರಿಯಾಗಿ ಪಶ್ಚಿಮದ ದಿಕ್ಕನ್ನು ನೋಡಿ ಹಣೆಯಲ್ಲಿ ಕುಂಕುಮ ಧರಿಸಿಕೊಳ್ಳುವರೋ ಅವರಿಗೆ ಮತ್ತು ಅವರ ಕುಟುಂಬದಲ್ಲಿ ಯಾರಿಗಾದರೂ ಬಗೆಹರಿಯದ ಹಾಗೂ ಎಂತಹ ವೈದ್ಯರಿಂದಲೂ ಗುಣಪಡಿಸಲಾಗದ ಅತ್ಯಂತ ಘೋರ ರೋಗರುಜನಗಳಿದ್ದರೆ ಅವು ನಾಶವಾಗಿಬಿಡುತ್ತವೆ.



## ಮಾರಾಟಕ್ಕೆ ಸಿದ್ಧವಾಗಿರುವ ಪುಸ್ತಕಗಳು

ಶ್ರೀ ವೆಂಕಟೇಶ ಸುಪ್ರಭಾತ
ವ್ಯಾಖ್ಯಾನಸಹಿತ ಬೆಲೆ 2-50
ಗುರು ಶ್ರೀಶ ವಿಠಲದಾಸರ ಕೃತಿಗಳು
ಸಂ - ಕೆ. ಅಪ್ಪಣ್ಣಾಚಾರ್ಯ ಬೆಲೆ 6-00
ದಾಸತತ್ತ್ವಪ್ರಕಾಶಿಕೆ
ಸಂ - ಕೆ ಅಪ್ಪಣ್ಣಾಚಾರ್ಯ ಬೆಲೆ : 10-00
ಸ್ತೋತ್ರಕುಸುಮ ಮಾಲಾ
ಸಂ - ಎಂ. ಎಸ್. ವೆಂಕಟಾಚಲಂ 3-00
ತ್ಯಾಗರಾಜಸ್ವಾಮಿ ಕೃತಿಗಳ
ಹಲವು ಮುಖಗಳು
ಎಸ್. ಎಸ್. ಮೂರ್ತಿ ಬೆಲೆ . 5-00
ಕರ್ನಾಟಕ ಹರಿದಾಸರು
ತೆಲುಗು, ಹಿಂದಿ, ಆಂಗ್ಲ, ಕನ್ನಡ 2-25
ಶ್ರೀ ಶ್ರೀನಿವಾಸನ ಹಾಡುಗಳು
ಪ್ರಸನ್ನ ವೆಂಕಟದಾಸರು
ಸಂ - ಕೆ. ಅಪ್ಪಣ್ಣಾಚಾರ್ಯ ಬೆಲೆ . 7-00
ಕನಕದಾಸರು ಅವರ ಸಾಹಿತ್ಯಸಮೀಕ್ಷೆ
ಸಂ - ಕೆ. ಅಪ್ಪಣ್ಣಾಚಾರ್ಯ 16-00
ಶ್ರೀದವಿಠಲದಾಸರ ಕೃತಿಗಳು
ಸಂ - ಕೆ. ಅಪ್ಪಣ್ಣಾಚಾರ್ಯ ಬೆಲೆ 9-00
ಉರಗಾದ್ರಿವಾಸ ವಿಠಲದಾಸರ
ಜೀವನ ಮತ್ತು ಕೃತಿಗಳು
ಸಂ - ಕೆ ಎಂ.ಕೃಷ್ಣರಾವ್ ಬೆಲೆ · 15-00
ಶ್ರೀ ಗುರು ವಿಜಯ ವಿಠಲದಾಸರ ಅಷ್ಟಕ
ಬೆಲೆ · 3-00
ಪುರಂದರೋಪನಿಷತ್
ಬನ್ನಂಜೆ ಗೋವಿಂದಾಚಾರ್ಯ 6-75
ನಮ್ಮ ಸಮಸ್ಯೆಗಳಿಗೆ
ಭಗವದ್ಗೀತೆಯ ಪರಿಷ್ಕಾರ
ಡಾ|| ಎಸ್ ಬಿ ರಘುನಾಥಾಚಾರ್ಯ
7-00
ಗೀತಾಸಾರೋದ್ಧಾರ
ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದರು.
14-00

ಅಂಚೆ ವೆಚ್ಚ ಪ್ರತ್ಯೇಕ. ಸಗಟು ಖರೀದಿಗೆ ಆಕರ್ಷಕ ಕಮಿಷನ್ ಉಂಟು. ವಿ.ಪಿ.ಪಿ. ಇಲ್ಲ, ಡಿ.ಡಿ. ಗಳನ್ನು ಮಾತ್ರ ಸ್ವೀಕರಿಸಲಾಗುವುದು. ಕೂಡಲೇ ಬರೆಯಿರಿ.

ಪುಸ್ತಕಮಾರಾಟ ವಿಭಾಗ,
ತಿ ತಿ ದೇ. ತಿರುಪತಿ - 517 507

ಯಾವ ಸ್ತ್ರೀಯರು ಸೂರ್ಯೋದಯದ ವೇಳೆಗೆ ಸರಿಯಾಗಿ ದಕ್ಷಿಣದ ದಿಕ್ಕನ್ನು ನೋಡಿ ಹಣೆಯಲ್ಲಿ ಕುಂಕುಮ ವನ್ನಿಟ್ಟುಕೊಳ್ಳುವರೋ ಅವರ ಮತ್ತು ಅವರ ಕುಟುಂಬದ ಸಕಲ ವಿರೋಧಿಗಳೂ ಮಿತ್ರ ರಾಗುತ್ತಾರೆ ಮತ್ತು ಶತ್ರುನಾಶವಾಗುತ್ತದೆ.

ಯಾವ ಸ್ತ್ರೀಯರು ಸೂರ್ಯೋದಯವೇಳೆಗೆ ಸರಿಯಾಗಿ ಉತ್ತರದ ದಿಕ್ಕನ್ನು ನೋಡಿ ಹಣೆಯಲ್ಲಿ ಕುಂಕುಮವನ್ನಿಟ್ಟುಕೊಳ್ಳುವರೋ ಅವರ ಮತ್ತು ಅವರ ಕುಟುಂಬದಲ್ಲಿ ವಂಶವೃದ್ಧಿಯೂ, ಭೂಮಿ ಮನೆಗಳ ಲಾಭವೂ ಧನ ಧಾನ್ಯ ಸಮೃದ್ಧಿಯೂ ಏರ್ಪಡುವುದು

ಜೀವನದಲ್ಲಿ ಏರ್ಪಡುವ ಉನ್ನತಿ ಅವನತಿಯು ಅವನು ಪಡೆದುಬಂದ ವಿಧಿವಿಲಾಸದಂತೆಯೇ ನಡೆಯುವುದು ಎಂಬುದು ನಿಶ್ಚಯವಾಗಿದ್ದರೂ ಕೂಡ ದೈವೀಭಾವದಿಂದ ಧರಿಸುವ ಈ ಕುಂಕುಮಕ್ಕೆ ತನ್ನದೇ ಆದ ಅಗೋಚರ, ಅನಂತವಾದ ಶಕ್ತಿಯಿದ್ದು ಈ ಮೇಲ್ಕಂಡ ಫಲಗಳನ್ನು ಕೊಡುವುದು ಸತ್ಯದಲ್ಲಿ ಸತ್ಯವೆಂದು ಶಾಸ್ತ್ರಗಳು ಘೋಷಿಸಿವೆ

ಸನಾತನ ಧರ್ಮವು ಸ್ತ್ರೀಯರಿಗೆ ಮತ್ತೆ ಕೆಲವು ಎಚ್ಚರಿಕೆ ಮತ್ತು ಸದಾಚಾರಗಳನ್ನು ಬೋಧಿಸುತ್ತದೆ.

ಹಣೆಯಲ್ಲಿ ಕುಂಕುಮ ಮತ್ತು ಕೊರಳಲ್ಲಿ ಮಾಂಗಲ್ಯವಿಲ್ಲದೆ, ತಲೆಬಿಟ್ಟುಕೊಂಡು ಮಲಗಬಾರದು ಮೈಗೆ ಒತ್ತುವುದು ಎಂದು ಮಾಂಗಲ್ಯವನ್ನು ಮಲಗುವ ಕೋಣೆಯಲ್ಲಿ ತೆಗೆದಿಟ್ಟು ಮಾರನೆಯದಿನ ಬೆಳಗ್ಗೆ ಕೋಣೆಯಿಂದ ಹೊರಬರುವಾಗ ಮಾಂಗಲ್ಯವನ್ನು ಧರಿಸುವುದು ಅಮಂಗಳಕರ

ಕನ್ಯಾಮಣಿಗಳೇ ಆಗಲಿ, ವಿವಾಹಿತ ಸ್ತ್ರೀಯರೇ ಆಗಲಿ ಹಾಳುಹಣೆಯಲ್ಲಿ ತಮ್ಮ ಮುಖವನ್ನು ಕನ್ನಡಿಯಲ್ಲಿ ನೋಡಿಕೊಳ್ಳಬಾರದು. ಹಾಳು ಹಣೆಯಲ್ಲಿ ಮತ್ತೊಬ್ಬ ಸುಮಂಗಲಿಯರನ್ನೋ ಅಥವಾ ವಿಶೇಷವಾಗಿ ತಮ್ಮ ಗಂಡನನ್ನೋ ನೋಡಬಾರದು.

ಸ್ನಾನ ಮಾಡುವಾಗ ಮುಖಪೂರ್ತಿ, ಎರಡು ಕೈಗಳು, ಕಾಲ್ಗಳು ಮತ್ತು ಧರಿಸಿರುವ ಮಾಂಗಲ್ಯಕ್ಕೆ ಚೆನ್ನಾಗಿ ಅರಿಶಿನ ಲೇಪಿಸಿ ಸ್ನಾನಮಾಡಬೇಕು ಸ್ನಾನವಾದೊಡನೆಯೇ ತಕ್ಷಣ ಮುಖವನ್ನೊರಸಿಕೊಂಡು ಅರಿಸಿನ ಅಥವಾ ಕುಂಕುಮವನ್ನು ಮುಖಕ್ಕೆ ಹಚ್ಚಿಕೊಳ್ಳಬೇಕು

ತಮ್ಮ ಹಾಗೂ ತಮ್ಮ ಹೆಣ್ಣುಮಕ್ಕಳ ಶೃಂಗಾರವರ್ಧನೆಗಾಗಿ, ಇದರಿಂದ ತಮಗೆ ವಿಶೇಷ ಶೋಭೆ ತರುವದೆಂಬ ಭ್ರಮೆಯಿಂದ ತಲೆಗೂದಲು ಮತ್ತು ಮುಖದ ಹುಬ್ಬುಗಳನ್ನು ಕತ್ತರಿಸಿಕೊಳ್ಳುವುದರಿಂದ ಆಯುಕ್ಷೀಣವು ನಿಶ್ಚಯವೆಂದು ನಿಷೇಧಿಸಿದೆ ಮತ್ತು ಕುಂಕುಮವಿಡದ ಸ್ತ್ರೀಯರಿಗೆ ಮಹಾಪಾತಕ ದೋಷ ಬರುವುದೆಂದು ಎಚ್ಚರಿಸಿದೆ

ಮನುಷ್ಯರ, ಅದರಲ್ಲೂ ವಿಶೇಷವಾಗಿ ಸ್ತ್ರೀಯರ ಕುದೃಷ್ಟಿಯು ಹಸಿರು ಹುಲ್ಲನ್ನೇ ಉರಿಸಿ ಬಿಡುವಂತಹ ಶಕ್ತಿಯುಳ್ಳದ್ದು, ಎಂತಹ ವಸ್ತುವನ್ನಾದರೂ ನಾಶಮಾಡಿ ಬಿಡುವಂತಹದು. ಆದಕಾರಣ ತಾವು ವಾಸಿಸುವ ಮನೆಗೆ ಹೊರಗಿನವರ ಯಾರ ಕಣ್ಣೂ ಬೀಳದಿರಲು ಮತ್ತು ಲಕ್ಷ್ಮೀನಿವಾಸ ಸ್ಥಾನವೂ ಆದ ಮನೆಯ ಮುಖದ್ವಾರದ ಹೊಸ್ತಿಲಿಗೆ ಪ್ರತಿನಿತ್ಯವೂ ಅರಿಶಿನ ಕುಂಕುಮವಿಡುವುದು ಮತ್ತು ಮನೆಮಂದಿಯೆಲ್ಲಾ ಕುಂಕುಮವಿಟ್ಟುಕೊಳ್ಳುವುದು ಅನಿವಾರ್ಯ

ಶ್ರೀವೈಷ್ಣವರು ಮತ್ತು ಶ್ರೀವೈಷ್ಣವ ದೀಕ್ಷೆ ಪಡೆದ ಅನ್ಯಕುಲದವರೂ ಮೂರು ನಾಮವನ್ನು ಹಾಕಿಕೊಳ್ಳುವಾಗಲೇ ಆಗಲಿ ಅಥವಾ ಹಣೆಯ ಮಧ್ಯದಲ್ಲಿ ಒಂದೇ ನಾಮವನ್ನು ಧರಿಸುವಾಗಲೇ ಆಗಲಿ, ನಾಸಿಕದ ಆದಿಯಿಂದ ಶಿರಸ್ಸಿನವರೆಗೆ ಊರ್ಧ್ವಮುಖವಾಗಿ ಧರಿಸುವ ಶ್ರೀಚೂರ್ಣವೆಂದು ಕರೆಯಲ್ಪಡುವ ಕುಂಕುಮದ ಪುಡಿಯಲ್ಲಿ ಮಹಾಲಕ್ಷ್ಮಿಯು ನಿವಾಸ ಹೊಂದಿರುವಳು ಎಂದು ಸಂಪ್ರದಾಯಗ್ರಂಥಗಳು ಉಲ್ಲೇಖಿಸುತ್ತವೆ

ಭಾರತೀಯ ಜ್ಯೋತಿಶ್ಶಾಸ್ತ್ರದಲ್ಲಿ ಒಂಬತ್ತು ಗ್ರಹಗಳಿಗೂ ಒಂಬತ್ತು ರೀತಿಯ ಕಲ್ಲನ್ನು ಆಗ್ರಹಗಳ ಪೀಡಾ ಪರಿಹಾರಾರ್ಥವಾಗಿ ಹೆಸರಿಸಿದ್ದಾರೆ ಯಾರಿಗೆ ಯಾವ ಗ್ರಹವು ಕೆಟ್ಟದ್ದಾಗಿ ಪರಿಣಮಿಸುವುದೋ ಆವಾಗ ಆ ಗ್ರಹಕ್ಕೆ ಸಂಬಂಧಪಟ್ಟ ಕಲ್ಲುಗಳುಳ್ಳ ಉಂಗುರವನ್ನು ಮಾಡಿಸಿ ಹಾಕಿಕೊಂಡರೆ ಗ್ರಹಪೀಡನೆಯಿಂದ ನಿವಾರಿಸಲ್ಪಡುತ್ತದೆ. ನವಗ್ರಹಗಳ ಕಲ್ಲುಗಳನ್ನು ಒಟ್ಟಿನಲ್ಲಿ ನವರತ್ನಗಳೆಂದು ಕರೆಯುವ ವಾಡಿಕೆ ಇದೆ. ನವಗ್ರಹಗಳಿಗೆಲ್ಲಾ ರಾಜಗ್ರಹವು ಸೂರ್ಯನಾಗುತ್ತಾನೆ. ಸೂರ್ಯನಿಗಾಗಿ ನವರತ್ನಗಳಲ್ಲಿ ಏರ್ಪಟ್ಟ ಕಲ್ಲು; ಕೆಂಪು ಕಲ್ಲಾಗಿದೆ. ಅಂತೆಯೇ ಕುಜಗ್ರಹಕ್ಕೆ ಏರ್ಪಟ್ಟ ಕಲ್ಲೂ ಸಹ ಒಂದು ರೀತಿಯ ಕೆಂಪು ಕಲ್ಲಾಗಿರುವ ಹವಳದ ಕಲ್ಲಾಗಿದೆ. ಕುಜದೋಷವಿರುವವರು ಹವಳದ ಕಲ್ಲಿನ ಉಂಗುರವನ್ನು ಹಾಕಿಕೊಳ್ಳುವುದರಿಂದ ದೋಷನಿವಾರಣೆಯಾಗುತ್ತದೆ.

ಕೆಂಪುವರ್ಣವು ಬಾಹ್ಯಪ್ರಪಂಚದಲ್ಲಿ ವಿರಕ್ತತೆ, ಆಧ್ಯಾತ್ಮಿಕ ಜೀವನದಲ್ಲಿ ಒಲವು ಮತ್ತು ಜ್ಞಾನಪ್ರದಾಯಕವಾದುದು ಆದಕಾರಣದಿಂದಲೇ ಯತಿಗಳು, ಸನ್ಯಾಸಿಗಳು, ಮಠಾಧೀಶರೂ ಕಾಶಾಯವೆಂಬ ಕೆಂಪು ವರ್ಣದ ವಸ್ತ್ರಗಳನ್ನು ಧರಿಸುವುದು

ಮುಖ
ದಲ್ಲಿ ಲಾಂಛನವಿಟ್ಟುಕೊಂಡಿರುವ ಧರ್ಮಾನುಷ್ಠಾನಿಗಳೆಡೆಗೆ ಮತ್ತು ಮುಖದಲ್ಲಿ ಕುಂಕುಮವನ್ನಿಟ್ಟುಕೊಂಡಿರುವ ಪತಿವ್ರತಾ ಶಿರೋಮಣಿಗಳ ಸಮೀಪಕ್ಕೆ ಯಮಕಿಂಕರರೂ ಸಹ ಹೋಗಲು ಭಯಪಡುವರೆಂದು ಶಾಸ್ತ್ರಪುರಾಣಗಳು ತಿಳಿಸುತ್ತವೆ.

ತಮ್ಮ ಮನೆಯ ಯಾವುದೇ ಶುಭಕಾರ್ಯಗಳಲ್ಲಿ ಕೊನೆಯ ಕಾರ್ಯಕ್ರಮವಾಗಿ ಅರಿಶಿನ ಮತ್ತು ಸುಣ್ಣದಿಂದ ಕಲೆತ ಕೆಂಪುನೀರಿನ ಆರತಿ ಎತ್ತಿ ಹೊರಗೆ ಹಾಕುವುದು ಇಂದಿಗೂ ನಡೆದುಬರುತ್ತಿರುವ ಪದ್ಧತಿಯಾಗಿದೆ ಈ ಕೆಂಪು ಸಕಲ ದೃಷ್ಟಿದೋಷಗಳನ್ನು ನಿವಾರಿಸುವ ಸಾಧನವಾಗಿದೆ

**ಸಾಮಾಜಿಕ ದೃಷ್ಟಿಕೋನ :** ಮುಖದಲ್ಲಿ ಕುಂಕುಮವನ್ನಿಟ್ಟುಕೊಂಡಿರುವ ಸ್ತ್ರೀಯು ತನ್ನ ರಕ್ಷಣೆಯನ್ನು ತಾನೇ ಮಾಡಿಕೊಳ್ಳುತ್ತಾಳೆ ಮುಖದಲ್ಲಿರುವ ಕುಂಕುಮ ಮತ್ತು ಕತ್ತಿನಲ್ಲಿರುವ ಅರಿಶಿನ ದಾರವನ್ನು (ಮಾಂಗಲ್ಯ) ನೋಡಿದ ಕೂಡಲೇ ಯಾವುದೇ ಲಫಂಗನೂ, ಚೋರನೂ, ದರೋಡೆಕೋರನೂ ಅವರ ಹತ್ತಿರ ಹೋಗಲು ಅಂಜುತ್ತಾನೆ, ಅಳುಕುತ್ತಾನೆ ಇದಿಲ್ಲದ ಸ್ತ್ರೀಯರನ್ನೇ ಸಾಮಾನ್ಯವಾಗಿ ಪೀಡಿಸಿ, ಬಂಗಾರದ ಆಭರಣಗಳನ್ನು ದೋಚುವುದರೊಂದಿಗೆ ಮಾನಹಾನಿ ಮಾಡಿ ಕೊನೆಗೆ ಪ್ರಾಣಹಾನಿಯವರೆಗೆ ಮುಂದುವರೆದುಬಿಡುತ್ತಾರೆ

ನಮ್ಮ ಭಾರತ ರಾಷ್ಟ್ರದ ಧ್ವಜವು ಕೆಂಪು, ಬಿಳಿ ಮತ್ತು ಹಸಿರು ಎಂಬ ತ್ರಿವರ್ಣಗಳಿಂದ ಕೂಡಿ ಬಿಳಿ ಭಾಗದ ಮಧ್ಯದಲ್ಲಿ ಚಕ್ರ ಚಿಹ್ನೆಯನ್ನು ಹೊಂದಿದೆ. ಇದರಲ್ಲಿ ಕೆಂಪು ಬಣ್ಣವು (ಕೇಸರಿ) ತ್ಯಾಗದ ಪ್ರತೀಕವೆಂದೂ ಹಸಿರು ಬಣ್ಣವು ಸಮೃದ್ಧತೆಯ ಪ್ರತೀಕವೆಂದೂ ಬಿಳಿಯ ಬಣ್ಣವು ಶಾಂತಿಯ ಪ್ರತೀಕವೆಂದೂ ಹಾಗೂ ಮಧ್ಯಭಾಗದಲ್ಲಿರುವ ಬಿಳಿಯ ಬಣ್ಣದ ಮಧ್ಯದ ಅಶೋಕಚಕ್ರವು ರಾಷ್ಟ್ರದ ಪ್ರಗತಿಯ ಸಂಕೇತವೆಂದೂ ವಿಶ್ಲೇಷಿಸಲಾಗಿದೆ

ರಾಜ ಮಹಾರಾಜರುಗಳ ಆಸ್ಥಾನಕ್ಕೆ ಬರುವ ವಿದ್ವಜ್ಜನರು ಪ್ರದರ್ಶಿಸುವ ತಮ್ಮ ಪ್ರತಿಭೆಗೆ ಮೆಚ್ಚಿ ಪುರಸ್ಕಾರರೂಪವಾಗಿ ರಾಜರುಗಳು ಕಪ್ಪಕಾಣಿಕೆಗಳೊಂದಿಗೆ ಅವರಿಗೆ ಜೋಡಿ ಜರತಾರಿ ಶಾಲುವನ್ನು ಹೊದಿಸಿ ಗೌರವಿಸುವುದು ಒಂದು ಸಂಪ್ರದಾಯವಾಗಿದ್ದಿತು ಆದರೆ ವಿದ್ವನ್ಮಣಿಗಳಿಗೆ ಹೊದಿಸುವ ಜರತಾರಿ ಶಾಲುಗಳು ಖಡ್ಡಾಯವಾಗಿ ಕೆಂಪು ಬಣ್ಣದ್ದೇ ಆಗಿರುತ್ತಿದ್ದಿತು ಇತರರು ಸಾಮಾನ್ಯವಾಗಿ ಇಂತಹ ಕೆಂಪು ಶಾಲುಗಳನ್ನು ಹೊದೆಯುತ್ತಿರಲಿಲ್ಲ ಕೆಂಪು ಜರತಾರಿ ಶಾಲುವನ್ನು ಹೊದ್ದು ಬಂದವರನ್ನು ವಿದ್ವಾಂಸರೆಂದೂ, ಪಂಡಿತರೆಂದೂ ಪರಿಗಣಿಸುವ ಪರಿಪಾಠವು ಪ್ರಾಚೀನಕಾಲದಿಂದ ಇಂದಿಗೂ ಚಾಲನೆಯಲ್ಲಿದೆ. ಇತ್ತೀಚೆಗೆ ಹಲವು ಮಠಾಧೀಶ್ವರರೂ, ಜಗದ್ಗುರುಗಳೆಂದು ಪ್ರಸಿದ್ಧಿಪಡೆದಿರುವ ಮಹಾಮಹಿಮರೂ ಆಗಾಗ ವಿದ್ವದ್ಗೋಷ್ಠಿಗಳನ್ನು ನಡೆಸಿ ವಿದ್ವಾಂಸರನ್ನು ಪಂಡಿತರ ಶಾಲುಗಳೆಂದು ಪ್ರಸಿದ್ಧಿ ಪಡೆದಿರುವ ಈ ಕೆಂಪು ಜರತಾರಿ ಶಾಲುಗಳಿಂದ ಗೌರವಿಸಿ, ಸನ್ಮಾನಿಸಿ ಕಳುಹುವ ಪದ್ಧತಿಯನ್ನು ಪ್ರಾರಂಭಿಸಿರುವುದು ಒಂದು ಶುಭಸಂಕೇತವೇ ಆಗಿದೆ.

ಕೆಂಪುಬಣ್ಣವು ನ್ಯಾಯ, ನೀತಿ, ಧರ್ಮ, ಭಕ್ತಿ ಮತ್ತು ಇಹಪರ ಸೌಖ್ಯದ ಪ್ರತೀಕವಾಗಿರುವುದು ಸಾಮಾನ್ಯವಾಗಿ ಯಾವುದೇ ನಗರದ,* ಊರಿನ, ಗ್ರಾಮಗಳ ಆಲಯಗಳು, ನ್ಯಾಯಾಸ್ಥಾನಗಳು ಮತ್ತು ಆರಕ್ಷಕ ಠಾಣೆಗಳ ಕಟ್ಟಡಗಳು ಕೆಂಪುವರ್ಣದ್ದಾಗಿರುತ್ತದೆ ತನ್ನಲ್ಲಿ ಮನೆ ಮಾಡಿರುವ ದುರಾಲೋಚನೆ, ದುರ್ನಡತೆಗಳನ್ನು ದೂರವಿಟ್ಟು, ಶಾಂತಿ ನೆಮ್ಮದಿಗಾಗಿ, ಇಹಪರ ಸೌಖ್ಯಕ್ಕಾಗಿ ಭಗವಂತನಲ್ಲಿ ಭಕ್ತಿಯಿಂದ ದೇಡುವ ಪವಿತ್ರವಾದ ಸ್ಥಳವು ಆಲಯವಾದರೆ, ನ್ಯಾಯ, ನೀತಿ, ಧರ್ಮವನ್ನು ಎತ್ತಿ ಹಿಡಿಯುವ ತ್ರಿವೇಣೀ ಸಂಗಮವು ನ್ಯಾಯಾಸ್ಥಾನವಾಗಿರುವುದು ತಾನು ಮಾಡಿದ ತಪ್ಪಿಗೆ (ನ್ಯಾಯಾಸ್ಥಾನದಿಂದ ಬರುವ ಆದೇಶದ ಮೇರೆಗೆ) ತಕ್ಕ ಶಿಕ್ಷೆ ವಿಧಿಸುವ ದಂಡ ನೀತಿಯ ಆಗರವು ಆ ರಕ್ಷಕ ಠಾಣೆಯಾಗಿರುವುದು ಆದಕಾರಣ, ಈ ಮೂರು ಕಟ್ಟಡಗಳೂ ಕೆಂಪುಬಣ್ಣದ ಕಟ್ಟಡಗಳಾಗಿವೆ

ರಸ್ತೆಯ ಬದಿಯಲ್ಲಿರುವ ಸಿಗ್ನಲ್ ಲೈಟುಗಳು ಮತ್ತು ರೈಲುಮಾರ್ಗಗಳಲ್ಲಿ ಕೆಂಪು ಲೈಟು ತೋರಿಸುವ ಉದ್ದೇಶ್ಯವೇ, ಅಪಾಯದ ಸೂಚನೆಯನ್ನು ಗಮನಿಸಲು ಮತ್ತು ನಿವಾರಿಸಿಕೊಳ್ಳಲೆಂದೇ ಆಗಿದೆ.

ತನ್ನ ಧರ್ಮ ಪತ್ನಿಯು ವ್ರತಾಸಕ್ತಳಾಗಿ ಪೂಜಿಸಿದ ಅಥವಾ ಸ್ವತಃ ತಾನೇ ದಿನಂಪ್ರತಿ ದೇವತಾರಾಧನೆ ಮಾಡಿ ಪ್ರಸಾದವಾಗಿ ಕುಂಕುಮವನ್ನು ಹಣೆಯಲ್ಲಿ ಹಚ್ಚಿಕೊಂಡು ತಮ್ಮ ಕಾರ್ಯದಲ್ಲಿ ಪ್ರವರ್ತಿಸಿದರೆ ಒಂದು ವಿಶಿಷ್ಟರೀತಿಯ ಮನೋಧೈರ್ಯವೂ, ಎಲ್ಲ ಕಾರ್ಯಗಳಲ್ಲಿಯೂ ಉತ್ಸಾಹ, ಸಹನೆ ಮತ್ತು ಹಿಡಿದ ಕೆಲಸವನ್ನು ಮಾಡಿಯೇ ಮುಗಿಸದೇಕೆಂಬ ಛಲ ಇವುಗಳು ತಾನಾಗಿ ಬಂದುಬಿಡುವುದು ಪ್ರತಿ ಸ್ತ್ರೀಯರಂತೆಯೇ ಪ್ರತಿ ಪುರುಷರೂ ಮುಖದಲ್ಲಿ (ಒಂದು ಲಾಂಛನ) ಕುಂಕುಮ ಧರಿಸುವುದು, ಸಭ್ಯತೆ, ಸತ್ ಸಂಪ್ರದಾಯ, ಸನ್ನಡತೆಯನ್ನು ಪ್ರತಿಬಿಂಬಿಸುವುದರಿಂದ ಪ್ರತಿಯೊಬ್ಬರೂ ಮುಖದಲ್ಲಿ ಲಾಂಛನವಿಡುವುದು ಅನಿವಾರ್ಯವಾಗಿದೆ.

ದೇಶದಲ್ಲಿ ಈ ಕುಂಕುಮದ ಉದ್ಯಮವು ಈಗ್ಗೆ 10-12 ವರ್ಷಗಳ ವರೆಗೆ ಒಂದು ದೊಡ್ಡ ಉದ್ಯಮವಾಗಿಯೇ ಇದ್ದಿತು ಆದರೆ ಇಂದು ಅದರ ವ್ಯಾಪಾರವು ಕೇವಲ ದೇವಾಲಯದ ಪೂಜೆಗಾಗಿ (ವಿಧಿಯಿಲ್ಲದೇ) ಕುಂಕುಮ ಕೊಳ್ಳುವುದರಲ್ಲಿ ಸೀಮಿತವಾಗಿದೆ. ಮನೆಯಲ್ಲಿ ಮಹಿಳೆಯರು ಮುಖದಲ್ಲಿ ಏನೂ ಧರಿಸುವುದಿಲ್ಲ ಒಂದುವೇಳೆ, ಹೊರಗಡೆ ಎಲ್ಲಾದರೂ ಹೋಗದೇಕಾಗಿ ಬಂದಾಗ, ಈಗ ಆಕರ್ಷಣೀಯವಾಗಿ ಬಂದಿರುವ ಕುಂಕುಮದ ಸ್ಟಿಕ್ಕರ್‌ನ್ನು ಮುಖದಲ್ಲಿಟ್ಟುಕೊಂಡು, ತಮ್ಮ ಕಾರ್ಯಗಳನ್ನು ಮುಗಿಸಿ ಬಂದನಂತರ, ಕೂಡಲೇ ಒಂದು ನಿಯಮಿತ ಸ್ಥಳದಲ್ಲಿ ಆ ಸ್ಟಿಕ್ಕರನ್ನು ಅಂಟಿಸಿಟ್ಟಿರುತ್ತಾರೆ ಆದರೂ ಆ ಸ್ಟಿಕ್ಕರ್‌ಗಳಲ್ಲಿ ಬಹುಪಾಲು ಕೆಂಪುಬಣ್ಣದ್ದೇ ಆಗಿರುವುದು ಒಂದು ಬಗೆಯ ಸಮಾಧಾನತಂದರೂ ಅದು ಶಾಸ್ತ್ರೀಯವಲ್ಲ

ಒಟ್ಟಿನಲ್ಲಿ, ಈ ಕುಂಕುಮದ ಮತ್ತು ಕೆಂಪುಬಣ್ಣದ ಪ್ರಾಶಸ್ತ್ಯ ಇಷ್ಟೆಂದು ಹೇಳಲು ಸಾಧ್ಯವಿಲ್ಲಾ ಇದು ಸಮಾಜದಲ್ಲಿ ಜನರಿಂದ ಮಾನ್ಯತೆಯನ್ನು ತಂದುಕೊಟ್ಟು ವೈಯಕ್ತಿಕ ಗೌರವವನ್ನು ಹೆಚ್ಚಿಸುವುದು ಎಂಬುದು ಸತ್ಯಾಂಶ. ಈ ಮಂಗಳ ದ್ರವ್ಯವನ್ನು ತಿರಸ್ಕಾರಾರ್ಹವಾಗಿ ಕಾಣದೇ ಶ್ರದ್ಧಾಭಕ್ತಿಯಿಂದ ಸಕಲರೂ ಉಪಯೋಗಿಸಿ ಬರುವುದರಿಂದ ಶಾಸ್ತ್ರಗಳು ಹೇಳಿರುವಂತೆ ಅದಕ್ಕೆ ತಕ್ಕ ಫಲಗಳನ್ನು ಪಡೆದೇ ಪಡೆಯುವರು ಎಂಬುದು ಅತಿಶಯೋಕ್ತಿಯಾಗಲಾರದು. ಆದಕಾರಣ, ಈ ಕುಂಕುಮದ ಉಪಯೋಗವನ್ನು ಪಡೆಯುವುದು ಪ್ರತಿಯೊಬ್ಬ ನಾರೀಮಣಿಯು ಹಾಗೂ ಸಂಭಾವಿತ ಪುರುಷರ ಸ್ವಂತ ನಿರ್ಣಯಕ್ಕೆ ಬಿಟ್ಟದ್ದಾಗಿದೆ.

# ಸ್ತುತ್ಯರ್ಹ ಅನುವಾದ

**ಬ್ರಹ್ಮವೈವರ್ತ ಮಹಾಪುರಾಣ**
**(ಪ್ರಥಮ ಭಾಗ)**
ಸಂ - ಪಂಢರೀನಾಥಾಚಾರ್ಯ ಗಲಗಲಿ,
ಪುಟಗಳು - 501+ 16 ಬೆಲೆ- ರೂ. 108/-
ಪ್ರ - ಕನ್ನಡ ಮಹಾಪುರಾಣ ಪ್ರಕಾಶನ ಮಂದಿರ
ಕೂರ್ಮಕೃಪ ವಿಶ್ವೇಶ್ವರನಗರ,
ಶಾಂತಿ ಕಾಲೋನಿ - ಹುಬ್ಬಳ್ಳಿ - 580032.

ಹಿಂದೂ ಧಾರ್ಮಿಕ ಪರಂಪರೆಯಲ್ಲಿ ಪುರಾಣ, ಪುಣ್ಯಕಥೆಗಳಿಗೆ ಮಹತ್ವದ ಸ್ಥಾನವನ್ನು ನೀಡಲಾಗಿದೆ. ಪ್ರತಿಯೊಬ್ಬ ಆಸ್ತಿಕ ಬಂಧುವೂ ಒಂದಿಲ್ಲೊಂದು ಪುರಾಣವನ್ನು ತನ್ನ ಜೀವಿತಕಾಲದಲ್ಲಿ ಓದಿ, ಕೇಳಿ ಪುನೀತನಾಗಲು ಬಯಸುವುದು ಸಹಜ. ಇಂತಹ ಪುರಾಣಗಳಲ್ಲಿ 'ಬ್ರಹ್ಮವೈವರ್ತ ಮಹಾಪುರಾಣ' ತನ್ನ ಹೆಸರಿಗೆ ಅನುಗುಣವಾಗಿ ಬೃಹತ್ ಸ್ವರೂಪವನ್ನು ಹೊಂದಿದೆ. ಹದಿನೆಂಟು ಸಾವಿರ ಶ್ಲೋಕಗಳಷ್ಟು ವಿಸ್ತಾರವಾದ ಪರಿಧಿಯನ್ನು ಹೊಂದಿರುವ ಈ ಪುರಾಣವನ್ನು ಕನ್ನಡದ ಪುರಾಣಪ್ರಿಯ ಓದುಗರ ಸಲುವಾಗಿ ಸುಂದರವಾಗಿ ಅನುವಾದಿಸಿಕೊಡುವ ಮೂಲಕ ಪಂಡಿತಪಂಢರೀನಾಥಾಚಾರ್ಯ ಗಲಗಲಿಯವರು ಸ್ತುತ್ಯರ್ಹವಾದ ಕೆಲಸವನ್ನು ಮಾಡಿದ್ದಾರೆ ಭಗವಾನ್ ವೇದವ್ಯಾಸರು ಪರಬ್ರಹ್ಮನಾದ ಶ್ರೀಹರಿಯ ಮಹಿಮೆಯನ್ನು ವಿಶದವಾಗಿ ವಿವರಿಸಿರುವ 'ಬ್ರಹ್ಮವೈವರ್ತ ಮಹಾಪುರಾಣ' ನಾಲ್ಕು ಖಂಡಗಳಲ್ಲಿ ವಿಭಕ್ತವಾಗಿರುವ ಮೇರು ಕೃತಿ ಪಂಢರೀನಾಥಾಚಾರ್ಯ ಗಲಗಲಿಯವರು ಓದುಗರ ಅನುಕೂಲ (ಗಾತ್ರ ಮತ್ತು ಬೆಲೆಯ ದೃಷ್ಟಿಗಳೆರಡನ್ನೂ ಗಮನದಲ್ಲಿಟ್ಟುಕೊಂಡು) ಕ್ಕಾಗಿ ಇಡೀ ಮಹಾಪುರಾಣವನ್ನು ಎರಡು ಭಾಗಗಳಲ್ಲಿ ಪ್ರಕಟಿಸಲು ಕೈಗೊಂಡ ತೀರ್ಮಾನ ಉಪಯುಕ್ತಕರವೇ ಆಗಿದೆ. ಪ್ರಥಮ ಭಾಗದಲ್ಲಿ ಮೂವತ್ತು ಅಧ್ಯಾಯವಿರುವ ಬ್ರಹ್ಮಖಂಡ, ಅರವತ್ತೇಳು ಅಧ್ಯಾಯವಿರುವ ಪ್ರಕೃತಿ ಖಂಡ ಮತ್ತು ನಲವತ್ತಾರು ಅಧ್ಯಾಯವಿರುವ ಗಣಪತಿ ಖಂಡಗಳು ಅಡಕವಾಗಿವೆ.

ಕೆಲವೊಂದು ಪುರಾಣಗಳಲ್ಲಿ ಉಕ್ತವಾಗಿರುವ ವಿಷಯಗಳಿಂದ 'ಬ್ರಹ್ಮವೈವರ್ತ ಮಹಾಪುರಾಣ' ಹೊರತಾಗಿದೆಯೆಂಬ ಕೊರತೆಯ ನಡುವೆಯೂ ಈ ಕೃತಿ ಮಹಾವಿಷ್ಣುವಿನ ಮಹಿಮೆ ಗರಿಮೆಗಳ ವಿರಾಟ್‌ಸ್ವರೂಪವನ್ನು ದರ್ಶನ ಮಾಡಿಸುವಲ್ಲಿ ಸಫಲವಾಗಿದೆ. ಶ್ರೀಮದ್ ಭಾಗವತದ ರೀತಿಯಲ್ಲಿ ಪ್ರಮುಖ ವೈಷ್ಣವ ಪುರಾಣವೆಂದು ಪರಿಗಣಿತವಾಗಿರುವ ಬ್ರಹ್ಮವೈವರ್ತ ಮಹಾಪುರಾಣದ ಮೊದಲನೆಯ ಭಾಗದಲ್ಲಿ ಶ್ರೀಹರಿಯ ದಿವ್ಯಲೀಲೆಗಳು, ಪ್ರಕೃತಿಯ ಮಹಿಮೆಗಳು, ಭಗವಂತನ ಆರಾಧನೆಗೆ ಸಾಧನವಾಗಿರುವ ವಸ್ತುಗಳ ಸಮಗ್ರ ಪರಿಚಯ, ವಿಘ್ನತಾರಕನಾದ ಗಣಪತಿಯ ವೃತ್ತಾಂತಗಳು ಹಾಸು ಹೊಕ್ಕಾಗಿವೆ. ಈ ಕೃತಿಯ ಹಿರಿಮೆಯನ್ನು ಹೆಚ್ಚಿಸುವಂತೆ ಹಲವಾರು ಪುರಾಣ, ಉಪನಿಷತ್ ಶ್ಲೋಕಗಳನ್ನು ಅಲ್ಲಲ್ಲಿ ಪೂರಕವಾಗಿ ಬಳಸಿಕೊಳ್ಳಲಾಗಿದೆ

ಬ್ರಹ್ಮವೈವರ್ತ ಮಹಾಪುರಾಣ ಆಸ್ತೀಕ ಬಾಂಧವರ ಜೊತೆಯಲ್ಲಿ ತಾಂತ್ರಿಕ ಸಾಧಕರಿಗೂ ಪ್ರಯೋಜನಕರವಾಗಿದೆ. ಮೂಲಕೃತಿಯಲ್ಲಿ ಇರದಿದ್ದ ತಾಂತ್ರಿಕ ಭಾಗಗಳು ತರುವಾಯ ಪ್ರಕೃತಿ ಖಂಡ ಮತ್ತು ಗಣೇಶಖಂಡ (ಕವಚ ಸ್ತೋತ್ರ, ಮಂತ್ರ ಸ್ತೋತ್ರ, ಧ್ಯಾನವಿಧಿಗಳ ರೂಪದಲ್ಲಿ) ಗಳಲ್ಲಿ ಸೇರ್ಪಡೆ ಆಗಿರಬಹುದೆಂಬ ಅನಿಸಿಕೆಯಿದೆ

ಮಾನವನ ಸರ್ವತೋಮುಖ ಅಭ್ಯುದಯ, ಸರ್ವಾಂಗೀಣ ವಿಕಾಸ ಹಾಗೂ ಆಧ್ಯಾತ್ಮಿಕ ಉನ್ನತಿ ಹೊಂದಬೇಕೆಂಬ ಘನ ಉದ್ದೇಶವನ್ನು ಹೊಂದಿರುವ ಬ್ರಹ್ಮವೈವರ್ತ ಮಹಾಪುರಾಣದ ಸಂಸ್ಕೃತ ಶ್ಲೋಕವನ್ನು ಉಪಯೋಗಿಸಿರುವ ಸಂದರ್ಭಗಳಲ್ಲಿ ಕನ್ನಡದಲ್ಲಿ ಭಾವಾನುವಾದವನ್ನು ನೀಡಿರುವುದು ಕೃತಿಯನ್ನು ಸುಗಮವಾಗಿ ಓದಿಸಿಕೊಂಡು ಹೋಗಲು ಸಹಾಯಕವಾಗಿದೆ ಉಪವಾಸ, ವ್ರತಾದಿಗಳ ಆಚರಣೆಯಿಂದ ಲಭಿಸುವ ಫಲಾಫಲಗಳ ಸವಿವರ ವರ್ಣನೆಯಿರುವುದು, ಅದರಲ್ಲಿಯೂ ಯಾವುದೇ ರೀತಿಯ ಗೊಂದಲಕ್ಕೂ ಎಡೆಮಾಡಿಕೊಡದ ರೀತಿಯಲ್ಲಿ ಸರಳ ಭಾಷೆಯನ್ನು ಬಳಸಿರುವುದು ನಿಜಕ್ಕೂ ಕೃತಿಯ ಮೌಲ್ಯವನ್ನು ಮತ್ತಷ್ಟು ಹೆಚ್ಚಿಸಿದೆಯೆಂದು ಹೇಳಬಹುದು.

ಪಂಢರೀನಾಥಾಚಾರ್ಯ ಗಲಗಲಿಯವರು ರೂಪಿಸಿಕೊಂಡಿರುವ ಸುಲಲಿತ ಶೈಲಿಯ ಜೊತೆಯಲ್ಲಿ ತಪ್ಪುಗಳು ಇಲ್ಲದ ಸುಂದರ ಮುದ್ರಣ ಮತ್ತು ವಿನ್ಯಾಸಗಳು 'ಬ್ರಹ್ಮವೈವರ್ತ ಮಹಾಪುರಾಣ'ವನ್ನು ಮತ್ತಷ್ಟು ಆಪ್ಯಾಯಮಾನವನ್ನಾಗಿ ಮಾಡಿವೆ. ಆದರೆ ರಕ್ಷಾಪುಟವನ್ನು ಹೊರತು ಪಡಿಸಿದಂತೆ ಉಳಿದಂತೆ ದೇರೆಲ್ಲೂ ಚಿತ್ರಗಳನ್ನು ಬಳಕೆ ಮಾಡಿಲ್ಲದಿರುವುದು ಒಂದು ರೀತಿಯಲ್ಲಿ ಕೊರತೆಯೆಂದು ಹೇಳಿದರೆ ತಪ್ಪಾಗಲಾರದು ಮುಂಬರುವ ದ್ವಿತೀಯ ಭಾಗದಲ್ಲಿಯಾದರೂ ಈ ಕೊರತೆಯನ್ನು ನಿವಾರಿಸುವ ನಿಟ್ಟಿನಲ್ಲಿ ಗ್ರಂಥಕರ್ತರು ಮತ್ತು ಪ್ರಕಾಶಕರು ಆಲೋಚಿಸುವುದು ಉತ್ತಮ

ಒಟ್ಟಿನಲ್ಲಿ ಆಧ್ಯಾತ್ಮಿಕ, ಧಾರ್ಮಿಕ ಪ್ರಕಟಣೆಗಳು ಈ ಕಾಲದಲ್ಲಿ ಪ್ರಕಾಶನಗೊಳ್ಳುವುದೇ ಅಪರೂಪ ಎನಿಸುವಂತಹ ಸಂದರ್ಭದಲ್ಲಿ 'ಬ್ರಹ್ಮವೈವರ್ತ ಮಹಾಪುರಾಣ' ಅತ್ಯಂತ ಸೂಕ್ತ, ಸಕಾಲಿಕವಾಗಿ ಹೊರಬಂದಿದೆಯೆಂದು ಹೇಳಲು ಅಡ್ಡಿಯಿಲ್ಲ

**- ಎಚ್. ಕೆ. ರಾಘವೇಂದ್ರ**

ಅಪವಿತ್ರಃ ಪವಿತ್ರೋ ವಾ
ಸರ್ವಾವಸ್ಥಾಂ ಗತೋಽಪಿ ವಾ
ಯಃ ಸ್ಮರೇತ್ ಪುಂಡರೀಕಾಕ್ಷಂ
ಸ ಬಾಹ್ಯಾಭ್ಯಂತರಃ ಶುಚಿಃ

ಅಪವಿತ್ರನಿರಲಿ ಪವಿತ್ರನಿರಲಿ ಯಾವುದೇ ಅವಸ್ಥೆಯಲ್ಲಿರಲಿ ಯಾರು ತಾವರೆಯಂಥ ಕಣ್ಣಿನ ಹರಿಯನ್ನು ನೆನೆಯುವನೋ ಅವನು ಹೊರಗೂ ಒಳಗೂ ಶುಚಿ ಎನಿಸುತ್ತಾನೆ

ಕರ್ಮಾರಂಭೇ ಚ ಮಧ್ಯೇ ವಾ
ಶೇಷೇ ವಿಷ್ಣುಂ ಚ ಯಃ ಸ್ಮರೇತ್
ಪರಿಪೂರ್ಣಂ ತಸ್ಯ ಕರ್ಮ
ವೈದಿಕಂ ಚ ಭವೇದ್ ದ್ವಿಜ

ಯಾವುದೇ ಕರ್ಮದ ಆರಂಭ, ಮಧ್ಯ ಅಂತ್ಯಗಳಲ್ಲಿ ಯಾರು ಹರಿಸ್ಮರಣೆ ಮಾಡುವನೋ ಅವನ ಆ ಕರ್ಮ ಯಥಾಶಾಸ್ತ್ರೀಯವೆನಿಸಿ ಪೂರ್ಣಫಲದಾಯಕವಾಗುವುದು

# ಭಜನ ಮಂದಿರಗಳು

- ರಘುಸುತ.

ಪ್ರತಿಯೊಬ್ಬ ವ್ಯಕ್ತಿಯ ಆತ್ಮೋನ್ನತಿಗೆ, ಚಿತ್ತ ಶುದ್ಧಿಗೆ ಭಗವನ್ನಾಮಸ್ಮರಣೆ ಅತ್ಯಂತ ಅಗತ್ಯವಾದುದು. ವ್ಯಕ್ತಿತ್ವ ನಿರ್ಮಾಣಕ್ಕೆ ಮನಸ್ಸಿನ ಶುದ್ಧಿ ಬೇಕೇ ಬೇಕು ಇದಕ್ಕೆ ದೇವರ ಧ್ಯಾನ ಮಾಡಲೇಬೇಕು. ಮನೆಯಲ್ಲಿ ಕೆಲವೊಮ್ಮೆ ಇದು ಸಾಧ್ಯವಾಗದೆ ಇರಬಹುದು ಅದಕ್ಕಾಗಿ ಅವನು ದೇವಾಲಯಕ್ಕೆ ಹೋಗುವನು ಆದರೆ ಭಗವಂತನ ನಾಮವನ್ನು ಉಚ್ಚರಿಸಬೇಕೆಂಬ ಇಷ್ಟವೂ ಇರುತ್ತದೆ, ಅದು ತನ್ನದೇ ಆದ ಭಾಷೆಯಲ್ಲಿ ಮಾಡಿಕೊಳ್ಳಬೇಕಾದ ಅಗತ್ಯವೂ ಇರುತ್ತದೆ. ಅವನಿಗೆ ದೇವರ ಧ್ಯಾನ ಮಾಡುವ, ಭಗವಂತನ ನಾಮಾವಳಿಗಳನ್ನು, ಸ್ತೋತ್ರಗಳನ್ನು ಹೇಳಿಕೊಡುವ, ಅವನ ದಿವ್ಯಲೀಲೆಗಳನ್ನು ಉಚ್ಚರಿಸುವ 'ಭಜನೆ' ಪದ್ಧತಿ ಬೇಕು ಇದು ನಮ್ಮ ಸಂಸ್ಕೃತಿಯಲ್ಲಿ ಮೊದಲಿನಿಂದಲೂ ರೂಢಿಯಲ್ಲಿದೆ. ಈ ರೀತಿಯ ಭಜನಾವಳಿಗಳನ್ನು ಹೇಳಿಕೊಳ್ಳುವುದಕ್ಕಾಗಿ ಒಂದು ಮಂದಿರವಿರುತ್ತದೆ. ಇದೇ ಭಜನಮಂದಿರ

ಈ ಭಜನಮಂದಿರಗಳು ದೇವಾಲಯಗಳಂತಹವಲ್ಲ ವಿಗ್ರಹಗಳು ಇರಬೇಕು; ಅರ್ಚಕರು ಇರಬೇಕೆಂಬ ನಿರ್ಬಂಧವಿಲ್ಲ. ಕೆಲವೊಂದು ದೇವರ ಪಟಗಳನ್ನು ಒಂದೆಡೆ ಜೋಡಿಸಿ, ಅವಕ್ಕೆ ಹೂವಿನ ಹಾರವನ್ನು ಅರ್ಪಿಸಿ, ಭಕ್ತನು ತನಗೆ ಇಷ್ಟಬಂದ ಕೆಲವು ಹಾಡುಗಳನ್ನು ಹೇಳಿಕೊಂಡು, ಕಡೆಯಲ್ಲಿ ಮಂಗಳಾರತಿ ಮಾಡುವನು ಇದು ಸಾಮಾನ್ಯವಾಗಿ ಭಜನ ಮಂದಿರಗಳಲ್ಲಿ ನಡೆಯುವ ಪದ್ಧತಿ; ಆದರೆ ಗೋಷ್ಠೀಗಾಯನಗಳ ರೂಪದಲ್ಲಿ ಇರುತ್ತವೆ. ನಾಲ್ಕೈದು - ಏಳೆಂಟು ಭಕ್ತರು ಸೇರಿ, ತಮಗೆ ಗೊತ್ತಿರುವ ಭಾಷೆಯ, ಗೊತ್ತಾದ ಹಾಡನ್ನು ಒಟ್ಟಾಗಿ ಹೇಳಿಕೊಂಡು, ದೇವರ ಧ್ಯಾನ ಮಾಡುವರು

ಇದಕ್ಕೆ ಕ್ರಮಬದ್ಧವಾದ ಸಂಗೀತ ಶಿಕ್ಷಣ ಇರುವುದಿಲ್ಲ ಪರಂಪರೆಯಿಂದ ಬಂದಿರುವ ರಾಗ, ತಾಳಗಳನ್ನು ಅನುಸರಿಸುತ್ತಾ ಬರುವರು.

ಇದು ಜನಸಾಮಾನ್ಯರು ಭಗವಂತನನ್ನು ಧ್ಯಾನಿಸುವ ಸ್ಥಳವಾಗಿರುತ್ತದೆ. ದೇವಾಲಯದಲ್ಲಿರುವಂತೆ, ಹೂವು ಹಣ್ಣು ಪ್ರಸಾದಗಳ ಗೊಂದಲವಿಲ್ಲಿರುವುದಿಲ್ಲ. ಯಾರದೋ ಪೂಜೆ, ಯಾರದೋ ಚರುಪ್ಪ ಎಲ್ಲರಿಗೂ ಗೊತ್ತಿರುವ ಹಾಡುಗಳನ್ನು ಹಾಡುವಿಕೆ, ಯಾರು ಏನು ಅಂದುಕೊಳ್ಳುವರು ಎನ್ನುವ ಭಯ ಇರುವುದಿಲ್ಲ. ಸರಾಗವೋ ಅಪಸ್ವರವೋ ಯಾರೂ ಏನೂ ಪ್ರಶ್ನಿಸುವುದಿಲ್ಲ ಭಗವಂತನನ್ನು ಸಂಪ್ರೀತಿಗೊಳಿಸುವುದೇ ಭಕ್ತನ ಗುರಿಯಾಗಿರುತ್ತದೆ. ಇದರೊಂದಿಗೆ ಅವನಿಗೆ ಮನಸ್ತೃಪ್ತಿಯೂ ಇರುತ್ತದ. ಇದೊಂದು ಜನಪದದ ಧ್ಯಾನ ಸ್ಥಳವಾಗಿರುತ್ತದೆ.

ಬಹುಶಃ ಕಳೆದ ಶತಮಾನದ ಮಧ್ಯಭಾಗದಲ್ಲಿ ಸಾಮಾನ್ಯ ಜನತೆಯನ್ನು ಭಗವಂತನೆಡೆಗೆ ಕರೆದೊಯ್ಯುವ ಅನೇಕ ಪ್ರಯತ್ನಗಳಲ್ಲಿ ಭಜನಾವಳಿಗಳ ನಾಮಸ್ಮರಣೆಯನ್ನು ಹೇಳಿಕೊಳ್ಳುವ, ತಮಗೆ ಗೊತ್ತಿರುವ ದಾರಿಯಲ್ಲಿ ಪರಮಾತ್ಮನನ್ನು ಕಂಡುಕೊಳ್ಳುವ ಪ್ರಯತ್ನಮಾಡಲು ಕೆಲವು ಸಂತರು ನಡೆಸಿದ ಹೊಸ ಪ್ರಯತ್ನ ಇದಾಗಿರಬಹುದು. ಇದರ ಪರಿಣಾಮವಾಗಿ ವಿವಿಧ ಅಳತೆಗಳ ಭಜನೆ ಮನೆಗಳು ನಿರ್ಮಾಣಗೊಂಡವು

ಈ ನಿಟ್ಟಿನಲ್ಲಿ ಈ ಶತಮಾನದ ಪ್ರಾರಂಭದಲ್ಲಿ ಆಗ್ನೇಯ ಕರ್ನಾಟಕದಲ್ಲಿ ಸಂಚರಿಸಿದ ತುಳಸೀ ರಾಮದಾಸರು ಎನ್ನುವ ಸಂತರು ಒಂದು ಕ್ರಾಂತಿಯನ್ನೇ ನಡೆಸಿದರು. ಕೋಲಾರ ಜಿಲ್ಲೆಯ ಅನೇಕ ಊರುಗಳಲ್ಲಿ ಇವರು ನೆಲೆ ನಿಂತು ಉಪನ್ಯಾಸ, ಭಜನೆಗಳ ಮುಖಾಂತರ ನೂರಾರು ಭಕ್ತರನ್ನು ಆಕರ್ಷಿಸಿ, ಅವರಲ್ಲಿ ಧಾರ್ಮಿಕ ಜಾಗೃತಿಯನ್ನು ಉಂಟುಮಾಡಿದರು. ಅವರವರೇ ಕೆಲವರು ಜಾಗ ಕೊಂಡು, ಕೆಲವರು ಕಟ್ಟಡ ಕಟ್ಟಿಸಿ, ಕೆಲವರು ದೊಡ್ಡ ಆಕಾರದ ಪಟಗಳನ್ನು ತಂದು ಪ್ರತಿಷ್ಠಾಪಿಸಿದರು. ಒಂದೊಂದು ಗೊತ್ತಾದ ದಿನ, ಸಾಯಂಕಾಲ ಅಥವಾ ರಾತ್ರಿ ಎಂಟುಗಂಟೆಗೆ ಭಜನೆ ನಡೆಸುವ ವ್ಯವಸ್ಥೆ ಮಾಡಿದರು.



ಹೀಗಾಗಿ ಚಿಕ್ಕಬಳ್ಳಾಪುರದ ಹಳೆ ಊರು ಒಂದರಲ್ಲೆ ೧೫ ಭಜನಮಂದಿರಗಳಿವೆ. ಇವುಗಳಲ್ಲಿ ಕೆಲವು ಮಂದಿರಗಳು ಕೆಲವು ಜಾತಿಗಳದ್ದೇ ಆಗಿವೆ ನಮ್ಮ ತಾತ, ತಂದೆ ಹಾಗೂ ನಾನು ಇಂತಹ ಒಂದು ಭಜನ ಮಂದಿರದಲ್ಲಿ ಪೂಜೆ ಮಾಡುತ್ತಿದ್ದೆವು. ಸುಮಾರು ಮೂರು ದಶಕಗಳ ಹಿಂದಿನವರೆಗೂ ನಾನು ಮುಫ್ತಾಗಿ ಪೂಜೆ ಮಾಡಿದ್ದುಂಟು ಅಲ್ಲಿ ಬಲಜಿಗರದ್ದೇ ಒಂದು ಭಜನ ಮಂದಿರ, ಶ್ರೀನಿವಾಸ ಭಜನ ಮಂದಿರ ಎನ್ನುವುದು, ಕುರುಬ ಜನಾಂಗದ್ದೇ ಒಂದು ಭಜನ ಮಂದಿರ, ಕನಕದಾಸರ ಭಜನ ಮಂದಿರ ಎಂಬುದು, ಆರ್ಯ ವೈಶ್ಯರದ್ದೇ ಒಂದು, ಬ್ರಾಹ್ಮಣರದ್ದೇ ಒಂದು - ಹೀಗೆ ಆಯಾ ಜಾತಿಯವಂದ್ದಾದರೂ, ಎಲ್ಲ ಜಾತಿಗಳ ನಡುವೆ ಸಾಮರಸ್ಯವಿತ್ತು ಸುಮಧುರ ಬಾಂಧವ್ಯವಿದ್ದಿತು.

ಈ ಭಜನ ಮಂದಿರಗಳು ದೇವರುಗಳ ಹೆಸರನ್ನು ಹೊತ್ತ ಮಂದಿರಗಳಾಗಿದ್ದುವು - ಶ್ರೀನಿವಾಸ, ಶ್ರೀರಾಮ, ಶ್ರೀಕೃಷ್ಣ, ದೊಡ್ಡ ಭಜನ ಮಂದಿರ ಇತ್ಯಾದಿ. ದೇವಿಯ ಹೆಸರಿನ ಭಜನ ಮಂದಿರಗಳು ಇಲ್ಲವೇ ಇಲ್ಲವೆಂದು ಹೇಳಬೇಕು. ಕಾರಣ ಗೊತ್ತಿಲ್ಲ.

ಸಾಮಾನ್ಯವಾಗಿ ಈ ಭಜನೆ ಮಂದಿರಗಳು ಯಾವುದಾದರೊಂದು ಟ್ರಸ್ಟ್‌ಗೆ ಒಳಪಟ್ಟವುಗಳಾಗಿದ್ದುವು. ವಾರದಲ್ಲಿ ಒಂದು ದಿವಸ ಭಜನೆ ಮಾಡುವುದಲ್ಲದೆ ಶ್ರೀರಾಮ ನವಮಿ, ಶ್ರೀಕೃಷ್ಣ ಜನ್ಮಾಷ್ಟಮಿ, ಧನುರ್ಮಾಸ ಇತ್ಯಾದಿ ಹಬ್ಬಗಳಂದು ಐದಾರು ದಿನ ಹಿಂದೆ, ನಂತರದಲ್ಲಿ ಭಜನೆ ಮಾಡುವ ಮುಖಾಂತರ ಪೂಜೆಗಳನ್ನು ನೆರವೇರಿಸುವರು ಇಂದಿಗೂ ಈ ಪದ್ಧತಿ ರೂಢಿಯಲ್ಲಿದೆ ಆದರೆ ಟಿ ವಿ. ಇಂಟರ್‌ನೆಟ್, ಕಂಪ್ಯೂಟರ್, ವೆಬ್ ಸೈಟ್, ಹೊಸ ಥಳಕು ಪಳಕಿನ ಎದುರುಗಡೆ ಹಿಂದಿನ ಆ ವೈಭವವಿಲ್ಲ, ಆ ಭಕ್ತಿಯ ಕಂಪಿಲ್ಲ.

ಈ ಭಜನ ಮಂದಿರಗಳನ್ನು ಅಪರೂಪವಾಗಿ ಮದುವೆಗಳಿಗೆ ನೀಡುತ್ತಿದ್ದರೂ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ಅವಕಾಶ ನೀಡುತ್ತಿದ್ದವು. ಮೈಕ್ ಪ್ರಚಾರವಿಲ್ಲ. ಅಂದಿನ ಕಾರ್ಯಕ್ರಮಗಳು ಶುಭ್ರವಾಗಿದ್ದು, ರಾತ್ರಿ ಬಹಳ ಹೊತ್ತಿನವರೆಗೂ ನಡೆಯುತ್ತಿದ್ದವು. ಒಂದು ಭಜನ ಮಂದಿರದಲ್ಲಿ ನಡೆಯುವ ಹರಿಕಥೆಯು ರಾತ್ರಿ ಹತ್ತುಗಂಟೆಯ ನಂತರ ನಡೆಯುತ್ತಿದ್ದುದರಿಂದ, ಹಾರ್ಮೋ

ನಿಯಂ, ಮೃದಂಗವಾದನ, ದಾಸರ ಹಾಡುಗಳು ಇನ್ನೊಂದು ಭಜನೆ ಮನೆಯವರೆಗೂ ಕೇಳಿಸುತ್ತಿದ್ದು, ಜನರನ್ನು ಆಕರ್ಷಿಸುತ್ತಿದ್ದುವು. ಅರ್ಧಶತಮಾನದ ಹಿಂದಿನ ಎಲ್ಲ ಸಂಗೀತ ವಿದ್ವಾಂಸರ, ಹರಿಕಥಾ ವಿದ್ವಾಂಸರ ಕಛೇರಿ, ಹರಿಕಥೆಗಳು ನಮ್ಮೂರಿನಲ್ಲಿ ಅಥವಾ ನಾನಿದ್ದ ಭಜನ ಮಂದಿರದಲ್ಲಿ ನಡೆದದ್ದು ನನಗಿನ್ನೂ ನೆನಪಿದೆ. ಬರುವ ನಾಟಕ ಕಂಪೆನಿಗಳವರೂ ಕೂಡ ಇಂಥಹ ಭಜನೆಗಳಿಗೆ ಹಾಜರಾಗಿ ತಾವು ಹಾಡುತ್ತಿದ್ದ ನಾಟಕ ಮಟ್ಟುಗಳನ್ನು ಹಾಡಿ, ದೇವರನ್ನು ಹಾಗೂ ಜನರನ್ನು ರಂಜಿಸುವುದು ರೂಢಿಯಲ್ಲಿತ್ತು. ಕಂಪೆನಿ ಯಜಮಾನರೇ ತಮ್ಮ ನಟಿನಟಿಯರೊಂದಿಗೆ ಗೊತ್ತಾದ ದಿನ, ಗೊತ್ತಾದ ಭಜನ ಮಂದಿರಕ್ಕೆ ಬಂದು, ಭಜನೆ ಸೇವೆ ಮಾಡುತ್ತೇವೆಂದು ಹೇಳಿಕಳುಹಿಸುತ್ತಿದ್ದರು. ಅಂದಿನ ಪ್ರಸಾದದ ಖರ್ಚು ಅವರದ್ದೇ ಆಗಿರುತ್ತಿತ್ತು.

ಈ ರೀತಿಯಲ್ಲಿ ಭಜನ ಮಂದಿರಗಳು ಕಲಾ ಕೇಂದ್ರಗಳೂ ಸಾಂಸ್ಕೃತಿಕ ಚಟುವಟಿಕೆಗಳ ಕೇಂದ್ರಗಳೂ ಆಗಿರುತ್ತಿದ್ದುವು. ಒಮ್ಮೆ ನಮ್ಮ ಭಜನಮಂದಿರಕ್ಕೆ ಬಂದಿದ್ದ ಅಬ್ದುಲ್ ಪಾಷಾ ಎನ್ನುವ ಓರ್ವ ಆಂಧ್ರಪ್ರದೇಶದ ಹರಿಕಥಾ ವಿದ್ವಾಂಸರು ಬಂದಿದ್ದರು ವರ್ಷಗಳ ಕಾಲ ರಾಮಾಯಣ, ಪುರಾಣಗಳಲ್ಲಿ ತುಂಬಾ ಕಟ್ಟುನಿಟ್ಟಾಗಿದ್ದ ಈ ವ್ಯಕ್ತಿ, ತನ್ನ ಜೀವನದಲ್ಲಿ ಅದುವರೆವಿಗೆ ಕೇವಲ ಎಂಟು ಊರುಗಳಲ್ಲಿ ಮಾತ್ರ ರಾಮಾಯಣದ ಹರಿಕಥೆಯನ್ನು ಮಾಡಿದ್ದರಂತೆ. ಕಾಲಿಗೆ ಗೆಜ್ಜೆ ಕಟ್ಟಿಕೊಂಡು, ನೃತ್ಯಮಾಡುತ್ತಾ, ತಮ್ಮ ತುಂಬು ಕಂಠ ಶ್ರೀಯಿಂದ ಹಾಡುಗಳನ್ನು ಹೇಳುತ್ತಿದ್ದರೆ ಅದನ್ನು ಆಲಿಸುವುದೇ ಒಂದು ಸೊಗಸು; ವಿವರಗಳನ್ನು ಆಲಿಸುವುದೇ ಆನಂದ

ಸಂಗೀತ ವಿದ್ವಾಂಸರೂ ಕೂಡ ಇಂತಹ ಊರುಗಳಿಗೆ ಬಂದಾಗ ಭಜನ ಮಂದಿರದಲ್ಲಿ 'ಸಂಗೀತ ಸೇವೆ' ಮಾಡಿ, ತಮ್ಮ ಭಕ್ತಿಯನ್ನು ಪ್ರದರ್ಶಿಸುತ್ತಿದ್ದರು ಅವರಿಗೆ ಅದೊಂದು ಹೆಮ್ಮೆಯ ವಿಚಾರವೂ ಆಗಿತ್ತು ೫೦ ರ ದಶಕ ಪ್ರಾರಂಭದಲ್ಲಿ ಪತ್ರಿಕೋದ್ಯಮಿಯಾಗಿ ಮದ್ರಾಸ್‌ನಲ್ಲಿ ನಾನು ಶೆಮ್ಮಂಗುಡಿ, ಅರಿಯಾಕ್ಕುಡಿ, ಆಲತ್ತೂರು ಸಹೋದರರು, ಜಿ. ಎನ್. ಬಿ, ವಸಂತಕೋಕಿಲಂ - ಇತ್ಯಾದಿಯವರುಗಳನ್ನು ಭೇಟಿಯಾದಾಗ, ನಾನು ಯಾವ ಊರಿನಿಂದ ಬಂದೆ ಎಂಬುದನ್ನು ತಿಳಿದ ಮೇಲೆ ತಾವು ಆ ಭಜನ ಮಂದಿರದಲ್ಲಿ ಸಂಗೀತ ಸೇವೆ ಮಾಡಿದುದನ್ನು ಹೆಮ್ಮೆಯಿಂದ ನೆನಪಿಸಿಕೊಂಡರು ಹೀಗೆ ಭಜನಮಂದಿರಗಳು ಅಂದಿನ ಕಲಾಕೇಂದ್ರಗಳೂ ಆಗಿದ್ದುವು.

ಇಂತಹ ಭಜನ ಮಂದಿರಗಳು ಒಮ್ಮೊಮ್ಮೆ ಬಡ ವಿದ್ಯಾರ್ಥಿಗಳು ಇದ್ದು ಓದಿಕೊಳ್ಳಲು ಸಹಾಯವನ್ನೂ ಮಾಡುತ್ತಿದ್ದುವು. ಅಂತಹ ವಿದ್ಯಾರ್ಥಿಗಳು ಆ ಭಜನಮಂದಿರಗಳ ಉಸ್ತುವಾರಿ, ಶುಭ್ರತೆ, ಮತ್ತಿತರ ಕರ್ತವ್ಯಗಳನ್ನು ನಿರ್ವಹಿಸಿ, ತುಂಬಾ ಕಟ್ಟುನಿಟ್ಟಿನ ಜೀವನವನ್ನು ನಿರ್ವಹಿಸುತ್ತಿದ್ದರು. ಆದರೆ ಈ ಭಜನ ಮಂದಿರಗಳ ಧನುರ್ಮಾಸ ಕಾರ್ಯಕ್ರಮವು ಮಾತ್ರ ತುಂಬಾ ವ್ಯವಸ್ಥಿತವಾಗಿ, ಅಚ್ಚುಕಟ್ಟಾಗಿ, ಸಹಕಾರ ಮನೋಭಾವದಲ್ಲಿ ನಡೆಯುತ್ತಿದ್ದುವು. ಬಹಳ ಹಿಂದೆ ಒಂದು ತಿಂಗಳು ಧನುರ್ಮಾಸ ಕಾರ್ಯಕ್ರಮವು ನಡೆಯುತ್ತಿತ್ತು ನಂತರ ಅದು ಹದಿನೈದು ದಿನಗಳಿಗೆ, ತದ ನಂತರದಲ್ಲಿ ಎಂಟು ದಿನಗಳಿಗೆ ಇಳಿಯಿತು. ಈಗ ಮೂರು ನಾಲ್ಕು ದಿನ ಮಾಡಬಹುದು ಎಂದು ಕಾಣುತ್ತದೆ.

ಪೂಜಾ ದಿನಗಳಂದು ಪ್ರತಿ ದಿನ ಬೆಳಗಿನ ಜಾವ ಐದಕ್ಕೆಲ್ಲ ಭಕ್ತರುಗಳು ಭಜನೆಮನೆಯಲ್ಲಿ ಸೇರುವರು ಶ್ರುತಿ ಪೆಟ್ಟಿಗೆ, ತಾಳ, ಸಾಧ್ಯವಾದರೆ ಹಾರ್ಮೋನಿಯಂಗಳ ಸಮೇತ, ಒಂದು ಗರುಡ ಗಂಬ ದೀಪದ ಸಮೇತ ಭಕ್ತರು ಒಂದು ಗೊತ್ತಾದ ಮಾರ್ಗದಲ್ಲಿ ಹಾಡು ಹೇಳುತ್ತಾ ಬಂದು ಸುತ್ತು ಹೋಗಿ ಬರುವರು ಜೊತೆಗೆ ತೂರ್ಯವೂ ಇರುತ್ತದೆ ಸರದಿಯ ಮೇಲೆ ಗರುಡಗಂಬವನ್ನು ಹೊರುವವರು ಇರುತ್ತಾರೆ. ಬೆಳಿಗಿನ ಜಾವ, ಆ ಚುಮು ಚುಮು ಚಳಿಯಲ್ಲಿ ಉಚ್ಚ ಕಂಠದಲ್ಲಿ ಹಾಡುವ ದೇವರ ನಾಮಗಳು ನಿಶ್ಶಬ್ದ ವಾತಾವರಣದಲ್ಲಿ ಬಹಳ ಇಂಪಾಗಿ ಕೇಳಿಬರುತ್ತದೆ. ಹೀಗೆ ಒಂದು ಸುತ್ತು ಹೋಗಿ ಬಂದ ಮೇಲೆ, ಭಜನೆಮನೆಯಲ್ಲಿ ಮತ್ತೆ ಕೆಲವು ಹಾಡುಗಳನ್ನು ಹಾಡಿ, ಪೂಜೆ, ಮಂಗಳಾರತಿಗಳು, ಆದ ನಂತರ ಪ್ರಸಾದ ಸ್ವೀಕರಿಸಿ, ಎಲ್ಲರೂ ತೆರಳುವರು. ಸುಮಾರು ಬೆಳಗ್ಗೆ ಏಳೂವರೆಗೆಲ್ಲ ಈ ಕಾರ್ಯಕ್ರಮ ಮುಗಿಯುತ್ತಿತ್ತು.

ಸಂಕ್ರಾಂತಿ ಹಬ್ಬದಂದು ವಿಶೇಷ ವ್ಯವಸ್ಥೆ ಇರುತ್ತದೆ. ಅಂದು ಯಾವುದಾದರೊಂದು ದೇವಸ್ಥಾನದ ಉತ್ಸವ ವಿಗ್ರಹಗಳು, ರಥವನ್ನು ತಂದು, ಸುಮಾರು ೧೧ ಗಂಟೆಗೆ ಉತ್ಸವವನ್ನು ಹೊರಡಿಸುತ್ತಾರೆ. ಅದು ಅದುವರೆವಿಗೂ ಪ್ರತಿ ದಿನ ಬೆಳಗ್ಗೆ ಹೋಗುವ ಮಾರ್ಗವನ್ನು ಅನುಸರಿಸುತ್ತದೆ. ಮಾರ್ಗ ಮಧ್ಯದಲ್ಲಿ ಎಷ್ಟು ದೇವಸ್ಥಾನಗಳು, ಭಜನ ಮಂದಿರಗಳು ಬರುತ್ತವೆಯೊ ಅಲ್ಲಲ್ಲಿ ಉತ್ಸವದೊಂದಿಗೆ ಹೋಗಿರುವವರು ಭಜನೆ ಹಾಡುಗಳನ್ನು ಹಾಡಿ, ಮಂಗಳಾರತಿ ಮಾಡಿಸಿ, ಪ್ರಸಾದ ಸ್ವೀಕರಿಸಿ, ಮುಂದುವರೆಯುವರು. ಹೀಗೆ ಉತ್ಸವ ೧೧ ಕ್ಕೆ ಹೊರಟರೆ, ಅದು ಗೊತ್ತಾದ ಭಜನೆ ಮನೆಗೆ ಹಿಂತಿರುಗುವುದು ಮೂರಕ್ಕೋ, ನಾಲ್ಕಕ್ಕೋ, ಹಿಂತಿರುಗಿ ಬಂದ ಉತ್ಸವ ಮೂರ್ತಿಯಿರುವ ರಥವನ್ನು ಭಜನೆ ಮನೆಯ ಎದುರುಗಡೆ ನಿಲ್ಲಿಸಿ, ಭಕ್ತರೆಲ್ಲ ಭಜನೆ ಮನೆಯಲ್ಲಿ ಸೇರಿ, ಸುಮಾರು ಹೊತ್ತು ಭಜಿಸಿ ಮಾಡಿ, ಮಂಗಳಾರತಿ ಮಾಡಿಸುವರು. ತದನಂತರದಲ್ಲಿ ಪ್ರಮುಖ ಹಾಡುಗಾರರಿಗೆ, ಕಾರ್ಯಕರ್ತರಿಗೆ ಸೇವಾ ಕರ್ತರಿಗೆ ಹೂವಿನ ಹಾರಗಳನ್ನು ಹಾಕಿ ಗೌರವಿಸಲಾಗುವುದು. ತದನಂತರದಲ್ಲಿ ಎಲ್ಲರಿಗೂ ಪೊಂಗಲ್ ವಿನಿಯೋಗವಾಗುವುದು.

ಬಹಳಷ್ಟು ಭಕ್ತರಿಗೆ, ನಿಯಮವಾಗಿ ಇರುವವರಿಗೆ ಈ ಪೊಂಗಲೇ ಆಧಾರ. ಅಂದು ಅವರುಗಳು ಬೇರೆ ಏನನ್ನೂ ಸೇವಿಸುವುದಿಲ್ಲ. ಅದಕ್ಕೆ ತಕ್ಕಂತೆ ಪ್ರಸಾದ ವಿನಿಯೋಗವೂ ಆಗುತ್ತದೆ. ನನಗೆ ನೆನಪಿದ್ದಂತೆ, ನನ್ನ ಬಾಲ್ಯದಲ್ಲಿ ಒಂದು ಪಲ್ಲ (೧೦೦ ಸೇರು) ಅಕ್ಕಿಯನ್ನು ಪೊಂಗಲ್ ಮಾಡುತ್ತಿದ್ದೆವು. ಇದಕ್ಕೆ ತಕ್ಕಂತೆ ಹೆಸರುಬೇಳೆ, ಬೆಲ್ಲ, ದ್ರಾಕ್ಷಿ, ಗೋಡಂಬಿ, ಯಾಲಕ್ಕಿ, ಪಚ್ಚಕರ್ಪೂರ, ಕೇಸರಿ, ತುಪ್ಪ ಇತ್ಯಾದಿಗಳನ್ನು ಉಪಯೋಗಿಸಲಾಗುತ್ತಿತ್ತು. ಅಂದರೆ ಹೆಚ್ಚು ಕಡಿಮೆ ಪರಿಕರಗಳ ಸಮೇತ ಎರಡು ಪಲ್ಲಾ ಆಗುತ್ತಿತ್ತು. ಹದಿನೈದು, ಇಪ್ಪತ್ತು - ಐದಡಿ ಎತ್ತರದ ಕೊಳಗಗಳ ಪೊಂಗಲ್ ಇಳಿಯುತ್ತಿತ್ತು. ರಾಗಿ ಮುದ್ದೆಯಷ್ಟು ದಪ್ಪದ ಪೊಂಗಲ್ ಉಂಡೆಗಳನ್ನು ಮಾಡಿ ಸಾವಿರಾರು ಭಕ್ತರಿಗೆ ನೀಡುತ್ತಿದ್ದೆವು. ಇಂದು ಈ ವಿಚಾರ ಈಗಿನ ಜನಾಂಗಕ್ಕೆ ತಿಳಿಸಿದರೆ ಸುಳ್ಳು ಎಂದು ಹೇಳುತ್ತಾರೆ. ಆದರೆ ಐವತ್ತು ವರ್ಷಗಳ ಹಿಂದೆ, ಹೀಗೆಯೇ ನಡೆಯುತ್ತಿತ್ತು. ಈಗೆಲ್ಲ ಕನಸು ಇದು ದೇವರ ಕಾರ್ಯಕ್ಕಾಗಿ ಸಿದ್ಧಗೊಳಿಸಿದ ಈ ಪ್ರಸಾದವೂ ತುಂಬಾ ರುಚಿಕರವಾಗಿರುತ್ತಿತ್ತು.

ಅಂದು ಎರಡು ಗುಂಪಿನ ಭಜನೆ ಮಾಡುವವರು ಇರುತ್ತಿದ್ದರು. ಸಂಕ್ರಾಂತಿಯಂದು ಒಂದು ಗುಂಪು ಭಜನ ಮಂದಿರದಲ್ಲೆ ಇದ್ದು, ಮಂಗಳಾರತಿ ಆಗುವವರೆಗೂ ಹಾಡುಗಳನ್ನು ಹೇಳುತ್ತಿದ್ದರೆ, ಮತ್ತೊಂದು ಗುಂಪು ಉತ್ಸವ ವಿಗ್ರಹಗಳ ಸಹಿತ ಮೆರವಣಿಗೆಗೆ ಹೋಗಿ ಬಂದು, ಭಜನ ಮಂದಿರದಲ್ಲಿರುವ ಭಕ್ತರ ಜೊತೆಗೆ ಸೇರುತ್ತಿತ್ತು. ಮಂಗಳಾರತಿ ಪ್ರಸಾದ ವಿನಿಯೋಗ ಆದ ಮೇಲೆ ಎರಡೂ ಗುಂಪುಗಳವರು ಭಜನೆ ಮಾಡುತ್ತಾ ಯಾವ ದೇವಸ್ಥಾನದಿಂದ ರಥ, ಉತ್ಸವ ಮೂರ್ತಿಗಳನ್ನು ತಂದಿದ್ದರೊ, ಅಲ್ಲಿಗೇ ತೆಗೆದುಕೊಂಡು ಹೋಗಿ, ಹಿಂತಿರುಗಿಸುತ್ತಿದ್ದರು.

ಶ್ರೀಕೃಷ್ಣ ಜನ್ಮಾಷ್ಟಮಿಯನ್ನೂ ಇದೇ ರೀತಿ ಆಚರಿಸುವರು. ಯಶೋದೆಯ ಮಡಿಲಲ್ಲಿರುವ ಶ್ರೀಕೃಷ್ಣನ ಚಿತ್ರವಿರುವ ಪಟವನ್ನು ಉಯ್ಯಾಲೆ ಮಣೆಗೆ ಕಟ್ಟಿ ಬಾಳೆಕಂಬ, ಹೂವು ಇತ್ಯಾದಿಗಳಿಂದ ಅದನ್ನು ಅಲಂಕರಿಸುವರು. ಅಷ್ಟಮಿಯಂದು ರಾತ್ರಿ ಹತ್ತು ಗಂಟೆಗೆ ಭಜನೆ ಪ್ರಾರಂಭಿಸಿ, ೧೨ ಗಂಟೆಗೆ ಮುಗಿಸಿ ಮಂಗಳಾರತಿ ಮಾಡುವರು. ನಂತರ ಲಾಲಿ ಅಥವಾ ಜೋಜೋ ಹಾಡುಗಳನ್ನು ಹಾಡಿ, ಕೃಷ್ಣನ ಪಟವನ್ನು ಮೆಲ್ಲಗೆ ಉಯ್ಯಾಲೆಯಾಡಿಸುವರು. ಹೀಗೆ ಸುಮಾರು ಹೊತ್ತು ಲಾಲಿ ಹಾಡುಗಳು ಹಾಡಿದ ನಂತರ ಮಹಾ ಮಂಗಳಾರತಿ ಮಾಡಿ, ಪ್ರಸಾದ ವಿನಿಯೋಗ ಮಾಡುವರು. ಉಯ್ಯಾಲೆ ಯಾಡಿಸುವ ಈ ಘಟ್ಟ ತುಂಬಾ ಭಾವೋದ್ರೇಕವಾಗಿರುತ್ತದೆ. ತಾವು ಶಿಶುರೂಪದ ಶ್ರೀಕೃಷ್ಣನನ್ನು ಜೋಗುಳ ಹಾಡಿ ಮಲಗಿಸುತ್ತಿದ್ದೇವೆಯೊ ಎನ್ನುವ ಭಾವನೆ ಅಲ್ಲಿರುವವರೆಲ್ಲರಿಗೂನು ತುಂಬಾ ಸೊಗಸಾದ ಕೃಷ್ಣನ ಲಾಲಿ ಹಾಡಿಗಳು ಈ ಸಂದರ್ಭದಲ್ಲಿ ಹೊರಬರುತ್ತವೆ.

ಶ್ರೀರಾಮ ನವಮಿಯನ್ನೂ ಕೂಡ ಇದೇ ರೀತಿ ಆಚರಿಸುವರು. ಒಮ್ಮೊಮ್ಮೆ ರಾಮಾಯಣ ಪಾರಾಯಣ (ಬಾಲಕಾಂಡ) ವನ್ನೂ ಏರ್ಪಡಿಸುವುದು ಉಂಟು. ಶ್ರೀರಾಮ ಜನನದ ಹರಿಕಥೆಗಳೂ ಆಗಾಗ ನಡೆಯುತ್ತವೆ.

ಪ್ರತಿಯೊಂದು ಭಜನ ಮಂದಿರವೂ ತನ್ನದೇ ಆದ ಭಜನ ಮಂಡಲಿಗಳನ್ನು ಹೊಂದಿರುತ್ತದೆ. ಒಮ್ಮೊಮ್ಮೆ ಹತ್ತಿರದ ಊರುಗಳ ಜಾತ್ರೆಗಳಾದಾಗ, ರಥೋತ್ಸವದಂದು ಇಲ್ಲಿಂದ ಭಜನ ಮಂಡಲಿ ಹೋಗಿ ಅಲ್ಲಿನ ರಥೋತ್ಸವದಲ್ಲಿ ಭಾಗವಹಿಸಿ, ಹಿಂತಿರುಗಿ ಬರುತ್ತಿತ್ತು.

೧೯೪೫ ರಿಂದೀಚೆಗೆ ಕೆಲವು ಕಡೆ ಶಿರಡಿಯ ಸಾಯಿಬಾಬಾ ಭಕ್ತರು ಒಂದೆಡೆ ಸೇರಿ, ಇಂತಹ ಭಜನ ಮಂದಿರಗಳನ್ನು ಏರ್ಪಡಿಸಿಕೊಂಡಿರುವುದೂ ಉಂಟು. ಆದರೆ ಇದು ತುಂಬಾ ಕಡಿಮೆ ಸಂಖ್ಯೆಯಲ್ಲಿವೆ.

ಸಾಮಾನ್ಯವಾಗಿ ಇಂತಹ ಭಜನ ಮಂದಿರಗಳು ಹೆಚ್ಚಾಗಿ ಶ್ರೀನಿವಾಸನ ಹೆಸರನ್ನು ಹೊಂದಿರುತ್ತವೆ ನಂತರದ್ದು ಶ್ರೀರಾಮನದ್ದು. ಯಾವುದೇ ಹೆಸರಿದ್ದರೂ, ಪ್ರಧಾನವಾಗಿ ಮೂರು ಚಿತ್ರಪಟಗಳು ಮುಖ್ಯವಾಗಿರುತ್ತದೆ. ಮಧ್ಯದಲ್ಲಿ ಆ ಭಜನ ಮಂದಿರದ ಹೆಸರಿನ ದೇವರದ್ದು, ಎಡ, ಬಲಗಳಲ್ಲಿ ಶ್ರೀರಾಮ, ಶ್ರೀಕೃಷ್ಣ ಅಥವಾ ಶ್ರೀನಿವಾಸ ದೇವರದ್ದು ಪಟಗಳು.

ಈ ಭಜನ ಮಂದಿರಗಳಲ್ಲಿ ಪೂರ್ವಾಭಿಮುಖವಾಗಿರುವಂತೆ, ಇಲ್ಲವೆ ಉತ್ತರಾಭಿಮುಖವಾಗಿರುವಂತೆ ಮೂರಡಿ ಎತ್ತರದ ಒಂದು ಕಟ್ಟೆಯನ್ನು ಕಟ್ಟಿ ಅದರ ಹಿಂದಿನ ಗೋಡೆಯ ಮೇಲೆ ಎರಡು ಸಾಲು ಬರುವಂತೆ ಮೊದಲು ದೊಡ್ಡ ಆಕಾರದ ಪಟಗಳು, ನಂತರ ಚಿಕ್ಕ ಆಕಾರದ ಪಟಗಳು - ಪೂರ್ತಿ ಗೋಡೆಯನ್ನೆಲ್ಲ ತುಂಬುವಂತೆ ಜೋಡಿಸಿರುತ್ತಾರೆ. ಇದಕ್ಕೆ ದೀಪಾಲಂಕಾರವೂ ಇರುತ್ತದೆ.

ಗ್ರಾಮ ಪ್ರದೇಶಗಳಲ್ಲಿನ ತಕ್ಕಮಟ್ಟಿನ ಅನುಕೂಲವಂತರು ತಮ್ಮ ಮನೆಯ ಒಂದು ಕೊಠಡಿಯನ್ನು ಇಂತಹ ಕಾರ್ಯಕ್ಕಾಗಿ ನೀಡುವುದೂ ಉಂಟು ಕೆಲವೊಂದು ಪಟಗಳನ್ನಿಟ್ಟು, ಹಾಡು ಹಾಡುವ ರೂಢಿ ಇದೆ. ಆದರೆ ಇದು ಚಿಕ್ಕಪ್ರಮಾಣದ್ದು ಆಸ್ತಿ ಪಾಸ್ತಿಗಳ ವಿಲೇವಾರಿ ಆದಾಗ ಈ ಕೊಠಡಿಯು ಸಾಮಾನ್ಯವಾಗಿ ಸಾರ್ವಜನಿಕ ಸೊತ್ತಾಗಿರುತ್ತದೆ.

ಈ ಭಜನ ಮಂದಿರಗಳ ಎಲ್ಲ ದೊಡ್ಡ ಪಟಗಳೂ ೨ ಅಡಿ ಅಗಲ, ೩ ಅಡಿ ಎತ್ತರದ್ದಾಗಿರುತ್ತವೆ ಕೆಲವೊಮ್ಮೆ ಇದಕ್ಕಿಂತಲೂ ಎತ್ತರ ಅಗಲಗಳಿರುವ ಪಟಗಳೂ ಇರುತ್ತವೆ. ಈ ಎಲ್ಲ ಪಟಗಳೂ ಚಿನ್ನದ ರೇಖಿನ ಅಲಂಕಾರದಿಂದ ಕೂಡಿರುವ ತಂಜಾವೂರು ಶೈಲಿಯ ಪಟಗಳಾಗಿರುತ್ತವೆ. ತುಳಸೀ ರಾಮದಾಸರು ಈ ಪಟಗಳನ್ನು ತಾವೇ ಸ್ವತಃ ಆರಿಸಿ, ತಂಜಾವೂರಿನಿಂದ ತರಿಸುತ್ತಿದ್ದರು. ಭೈರವೀ ಕೆಂಪೇಗೌಡರೂ ಕೂಡ ಒಂದು ಭಜನೆ ಮನೆಗೆ ತಾವೇ ತಂಜಾವೂರಿಗೆ ಹೋಗಿ ಕಲಾತ್ಮಕವಾಗಿರುವ ಮೂರು ದೊಡ್ಡ ಪಟಗಳನ್ನು ತಂದು ಕೊಟ್ಟಿದ್ದಾರೆ. ಇವೆಲ್ಲ ಪಟಗಳೂ ಅತ್ಯುತ್ತಮ ಕಲಾತ್ಮಕ ಕೃತಿಗಳಾಗಿವೆ. ಈ ರೀತಿಯಲ್ಲಿ ತಂಜಾವೂರು ಚಿತ್ರ ಶೈಲಿಯ ಸಂಗ್ರಹವು ಈ ಭಜನ ಮಂದಿರಗಳಲ್ಲಿದ್ದು, ಆ ಕಲಾವಿದ್ಯಾರ್ಥಿಗಳಿಗೆ ಕಲಾಭ್ಯಾಸಕ್ಕೆ ಒಂದು ಉತ್ತಮ ಸಂಗ್ರಹಸ್ಥಾನವಾಗಿದೆ. ಇದೊಂದು ಕಲಾ ಸಂಗಮವೇ ಆಗಿದೆ. ಒಂದೆರಡು ಶತಮಾನಗಳ ಹಿಂದಿನ ಪಟಗಳೂ ಇಲ್ಲಿವೆ.

ಈ ಭಜನಮಂದಿರಗಳು ಧಾರ್ಮಿಕ ಸಾಹಿತ್ಯ ರಚನೆಗೂ ಸ್ಫೂರ್ತಿ ನೀಡಿವೆ. ಇಂತಹ ಭಜನೆ ಮನೆಗಳಲ್ಲಿ ಕುಳಿತೇ ಅನೇಕ ಸಂತರು ರಾಮನಾಮ, ದೇವರ ಧ್ಯಾನ ಮಾಡುತ್ತಾ ಅನೇಕ ಕೀರ್ತನೆಗಳನ್ನು ರಚಿಸಿದ್ದಾರೆ. ತುಳಸೀ ರಾಮದಾಸರು ತಮ್ಮ ಅನೇಕ ಕನ್ನಡ, ತೆಲುಗು ಕೀರ್ತನೆಗಳನ್ನು ಇಂತಹ ಭಜನ ಮಂದಿರಗಳಲ್ಲಿ ಕುಳಿತೇ ರಚಿಸಿದ್ದಾರೆ. ದೇವರ ಸಾನ್ನಿಧ್ಯ ಪ್ರಶಾಂತ ವಾತಾವರಣ, ಆಗಾಗ ದೇವರ ಧ್ಯಾನ - ಹೀಗಾಗಿ ಧಾರ್ಮಿಕ ಸಾಹಿತ್ಯ ರಚನೆಗೆ ಇವು ಸ್ಫೂರ್ತಿದಾಯಕವಾಗಿವೆ ಸಪ್ತಗಿರಿ ಪತ್ರಿಕೆಯ ಲೇಖಕ - ಬಳಗ ಅನೇಕರು ಈ ರೀತಿ ಧಾರ್ಮಿಕ ಸಾಹಿತ ನಿರ್ಮಿಸಿದವರೆ, ಪ್ರಸ್ತುತ ಈ ಲೇಖನದ ಲೇಖಕ, ದಿ|| ಬ ಸ ಗುಂಡೂರಾವ್, ವಿ. ಎಸ್. ರಾಮಾನುಜಾಚಾರ್ಯ, ಕಂದಾಡೈ ಕೇಶವನ್ - ಇತ್ಯಾದಿ ನಾವೆಲ್ಲರೂ ಈ ರೀತಿ ದೈವ ಸ್ಫೂರ್ತಿ, ದೈವ ಪ್ರೇರಣೆ ಪಡೆದು ಸಾಹಿತ್ಯ ರಚಿಸಿದವರೇನೆ. ಮೈಸೂರಿನ ಸಂತೇಪೇಟೆ ಯಲ್ಲಿನ ಕುಂಬಾರಗರ ಭಜನಮಂದಿರ (ಮಹಡಿ ಮೇಲಿನದು) ದಲ್ಲಿ ವೀಣೆ ಶೇಷಣ್ಣನವರು ಕೆಲವು ತಿಲ್ಲಾನಗಳನ್ನು ರಚಿಸಿದರೆಂದು ಹೇಳಲಾಗುತ್ತದೆ ಹೀಗಾಗಿ ಈ ಭಜನ ಮಂದಿರಗಳು ಧಾರ್ಮಿಕ ಸಾಹಿತ್ಯದ ಉಗಮವೂ ಆಗಿದೆ

ಹೀಗಾಗಿ ಇತ್ತೀಚಿನವರೆಗೂ ಈ ಭಜನ ಮಂದಿರಗಳು ಸಮಾಜದ ಒಂದು ಅಂಗವಾಗಿ ಪರಿಣಮಿಸಿದ್ದುವು ಸಾಂಸ್ಕೃತಿಕ ಹಾಗೂ ಕಲಾಕೇಂದ್ರಗಳೂ ಆಗಿದ್ದುವು ಪರಸ್ಪರ ಸದ್ಭಾವನೆಯನ್ನು ಬೆಳೆಸುವ ಕೊಂಡಿಗಳಾಗಿದ್ದುವು ಹಿಂದಿನ, ಹಿರಿಯ ತಲೆಮಾರಿನವರು ಇಂದು ಮರೆಯಾಗಿದ್ದಾರೆ. ಸಮಾಜದ ಹಿರಿಮೆ, ಹೆಗ್ಗಳಿಕೆಗಳನ್ನು ಸಾರುವ ಭಜನ ಮಂದಿರಗಳು ಇಂದು ನಿರ್ವೀರ್ಯವಾಗಿವೆ. ಇಂದಿನ ತಲೆ ಮಾರಿನವರಿಗೆ ಇವುಗಳ ಪ್ರಾಮುಖ್ಯತೆ ಮರೆತು ಹೋಗಿದೆ ಭಜನಮಂಡಳಿಗಳ ಪ್ರಮುಖ್ಯತೆಯೇ ಮರೆತು ಹೋಗಿದೆ. ತ್ಯಾಗರಾಜ ಇತ್ಯಾದಿ ಸಂತರು ಭಜನೆ ಮಾಡುವುದರ ಪ್ರಾಮುಖ್ಯತೆಯನ್ನು ಒತ್ತಿ ಹೇಳಿದ್ದರು. ತಿರುಪತಿ ಮತ್ತಿತರ ಧಾರ್ಮಿಕ ಕೇಂದ್ರಗಳಲ್ಲಿ ಭಜನ ಮಂಡಳಿಗಳು, ಭಜನ ಮಂದಿರಗಳು ಧಾರ್ಮಿಕ ಪ್ರಚಾರ ಕಾರ್ಯವನ್ನು ಮಾಡುತ್ತಿವೆ. ಆದರೆ ಹೊಸ ಬಡಾವಣೆಗಳ ಬೆಳವಣಿಗೆಯಲ್ಲಿ ಭಜನೆ ಮಂಡಳಿ, ಭಜನ ಮಂದಿರಗಳ ಇರುವಿಕೆ ಕಣ್ಮರೆಯಾಗಿಬಿಟ್ಟಿವೆ. ಈ ಪರಂಪರೆಯೇ ನಶಿಸಿ ಹೋಗುತ್ತಿದೆ. ಜನಪದದ ಈ ಕಲಾಸಂಪತ್ತು, ಧಾರ್ಮಿಕ ಸಂಪತ್ತನ್ನು ರಕ್ಷಿಸಬೇಕಾದುದು ನಮ್ಮೆಲ್ಲರ ಕರ್ತವ್ಯವಾಗಿದೆ.

ಇಂದಿನ ತಲೆಮಾರಿನವರು ಇದನ್ನು ಮರೆಯಬಾರದು



# ಕುರುಸಜ್ಜನ ಸಂಗತಿಮ್

ಪ್ರೊ|| ಎನ್. ಜಿ. ಕಾರಚೋಳ

ನಾರದ ಮಹರ್ಷಿಗಳು (ತ್ರಿಲೋಕ ಸಂಚಾರಿಗಳಲ್ಲವೇ! ಒಮ್ಮೆ ಭೂಲೋಕದಲ್ಲಿ ಜನ ಸಾಮಾನ್ಯರ ಕಣ್ಣಿಗೆ ಗೋಚಾರವಾಗದೆ, ಭಾರತ ದೇಶದ ಉದ್ದಗಲಕ್ಕು ಸಂಚರಿಸುವಾಗ ದೇವಾಲಯವೊಂದರ ಭಿತ್ತಿಯ ಮೇಲೆ "ಭಜ ಭಗವಂತಂ ಕುರು ಸಜ್ಜನ ಸಂಗತಿಂ" (ಭಗವಂತನನ್ನು ಸದಾ ಭಜಿಸು, ಸಜ್ಜನರೊಂದಿಗೆ ಸಂಗವಿರಿಸು) ಎಂದು ಬರೆದಿತ್ತು ನಾರಗರು ತಮ್ಮ ಮನದಲ್ಲೇ ಅಂದುಕೊಂಡರು ನಾನಂತೂ ಅಹರ್ನಿಶಿ ಭಗವಂತನ ನಾಮಗುಣ - ಸಂಕೀರ್ತನೆಯನ್ನೇ ಉಸಿರಾಗಿಸಿಕೊಂಡಿದ್ದೇನೆ. ಇನ್ನು ಸಜ್ಜನ ಸಂಗತಿಯ ಆವಶ್ಯಕತೆ ನನ್ನಂತಹವನಿಗೇಕೆ ಬೇಕು? ಶ್ರೀಕೃಷ್ಣನೂ ಆಗಾಗ ಅನೇಕರಿಗೆ ಸಜ್ಜನರ ಸಹವಾಸದಲ್ಲಿರಲು ಉಪದೇಶಿಸುತ್ತಿರುವುದನ್ನೂ ಕೇಳಿದ್ದೇನೆ ಸಜ್ಜನರ ಸಂಗದಿಂದ ಅದೇನು ಲಭ್ಯವೋ, ಅವನನ್ನೇ ಒಮ್ಮೆ ಕೇಳಿನೋಡೋಣ - ಎಂದು ನೇರವಾಗಿ ಹೋಗಿ ಎವೆಮುಚ್ಚೆ ತೆಗೆವಷ್ಟರಲ್ಲಿ ಭಗವಂತನ ಆವಾಸದ ಬಾಗಿಲಲ್ಲಿದ್ದರು

ನಾಗಶಯನನಾಗಿ ಮಲಗಿದ್ದ ಭಗವಂತ ನಾರದರ ಬರವನ್ನು ದೂರದಿಂದಲೇ ಕಂಡು ಎದ್ದು ಬಂದು ಬಾಗಿಲ ಬಳಿ ಮೃದುಮಂದಹಾಸದಿಂದಲೇ ಸ್ವಾಗತಿಸುತ್ತ, "ಏನು, ನಾರದರ ಸವಾರಿ ಇತ್ತ ಚಿತ್ತೈಸಿತಲ್ಲ! ಏನು ವಿಶೇಷ" - ಎಂದು ಕೇಳಿದ. ಭಕ್ತಿಯಿಂದ ಭಗವಂತನಿಗೆ ವಂದಿಸಿ ನಾರದರು ಲೋಕಾಭಿರಾಮದ ಮಾತುಗಳನ್ನಾಡಿ, ನೇರ ವಿಷಯಕ್ಕೇ ಇಳಿದರು "ಏನಿಲ್ಲ, ನೀನೂ, ಆಗಾಗ ಸಜ್ಜನ ಸಂಗಮಾಡುವುದೊಳಿತು ಎಂದು ಉಪದೇಶಿಸುತ್ತಿದ್ದುದನ್ನು ನಾನೂ ಹಲವಾರು ಬಾರಿ ಕೇಳಿದ್ದೆ ಇಂದು ಇಲ್ಲಿಯೇ ಆನತಿ ದೂರದಲ್ಲಿದ್ದ ದೇವಾಲಯವೊಂದರ ಭಿತ್ತಿಯ ಮೇಲೆ ಇದನ್ನೇ ಬರೆದುದನ್ನೂ ಓದಿ ಕುತೂಹಲ ಕೆರಳಿ, ಏನಂಥ ಅಲಭ್ಯ ಲಾಭ ಆದರಿಂದ? ಎಂದು ಕೇಳಬೇಕೆನ್ನಿಸಿ ಬಂದೆ, ಅಷ್ಟೇ" ಎಂದರು

ಶ್ರೀಕೃಷ್ಣ ತನ್ನ ತುಟಿಯಂಚಿನಲ್ಲೇ ತುಂಟನಗೆ ಸೂಸಿ, "ಈ ಪ್ರಶ್ನೆಗೆ ನಾನೇಕೆ? ಅದೋ ಅಲ್ಲಿ ಗೋವೊಂದು ಮೊನ್ನೆ ಹಾಕಿದ ಗೋಮಯದ ಮಧ್ಯೆ ಹರಿದಾಡುತ್ತಿರುವ, ಶತಪಾದಿಯೊಂದು ನಿನ್ನ ಪ್ರಶ್ನೆಗೆ ಸೂಕ್ತ ಸಮಾಧಾನವನ್ನು ನೀಡೀತು" ಎಂದ. ನಾರದರು ಮೂಗಿನ ಮೇಲೆ ದೆರಳಿಟ್ಟು "ಅಲ್ಲವಯ್ಯಾ! ನನ್ನ ಪ್ರಶ್ನೆಗೆ ಹುಳು ಹೇಗೆ ಉತ್ತರಿಸೀತು?" ಎಂದು ಮರುಸವಾಲೆಸೆದರು. "ಹೋಗಿ ಕೇಳಿನೋಡು, ಬಳಿಕ ನನ್ನನ್ನು ಪುನಃ ಕಾಣುವಿಯಂತೆ" ಎಂದ ಕೃಷ್ಣ ನಾರದರು ನಿರ್ವಾಹವಿಲ್ಲದೆ ಅಲ್ಲಿಗೆ ಹೋಗಿ "ಏ, ಹುಳುವೇ ಸಜ್ಜನರ ಸಂಗದ ಲಾಭವೇನು?" - ಎಂದು ಕೇಳಿದೊಡನೆ ಆ ಹುಳುವು ವಿಲಿವಿಲಿ ಒದ್ದಾಡಿ ಪ್ರಾಣವನ್ನು ಬಿಟ್ಟಿತು.

ನಾರದರು ವಾಪಸು ಬಂದು ನಡೆದುದೆಲ್ಲವನ್ನೂ ತದ್ವತ್ ಕೃಷ್ಣನಿಗೆ ನಿರೂಪಿಸಿದರು ಶ್ರೀಕೃಷ್ಣ ನಗುತ್ತಲೇ, "ಓಹೋ ಹೀಗಾಯ್ತೋ, ಇರಲಿ, ಅಗೋ, ಅಲ್ಲಿ ದೂರದಲ್ಲಿದ್ದ ವಿಶಾಲ ಅಶ್ವತ್ಥವೃಕ್ಷವೊಂದರ ಪೊಟರೆಯಲ್ಲಿ ಹೆಣ್ಣು ಶುಕವೊಂದು ಇಟ್ಟು ಕಾವು ಕೊಟ್ಟ ಮೊಟ್ಟೆಯೊಂದು ಬಿರಿದು ಇದೀಗ ಪುಟ್ಟ ಮರಿಯೊಂದು ಹೊರಬಂದಿದೆ ಅದನ್ನು ಕೇಳಿ ನೋಡು ನಿನ್ನ ಸಮಸ್ಯೆಗೆ ಉತ್ತರ ಲಭಿಸೀತು" - ಎಂದ ಆಗ ನಾರದರು, ತುಸುವ್ಯಗ್ರ ಚಿತ್ತದಿಂದಲೇ "ಸ್ವಾಮಿ, ವೃಥಾ, ಹುಳು, ಹಕ್ಕಿಗಳ ಹತ್ತಿರ ನನ್ನನ್ನು ಕಳಿಸಿ ಸತಾಯಿಸುವ ಬದಲು ನೀನೇ ಹೇಳಿದರಾಗದೇ" - ಎಂದರು ಕೃಷ್ಣ ಮುಗುಳ್ನಗುತ್ತಲೇ, ಹೋಗುವಂತೆ ಕೈಸನ್ನೆಮಾಡಿ, ವೃಕ್ಷದಬಳಿ ತೆರಳಲು ಸೂಚಿಸಿದ. ನಾರದರು ಯಥಾರೀತಿ ಆ ವೃಕ್ಷದ ಪೊಟರೆಯ ಬಳಿ ಬಂದು, ಇದೀಗ ಪಿಳಿ ಪಿಳಿ ಕಣ್ಣು ಬಿಡುತ್ತಲಿದ್ದ ಗಿಳಿಮರಿಗೆ ಮತ್ತದೇ ಪ್ರಶ್ನೆ ಕೇಳಿದರು ನಾರದರ ಪ್ರಶ್ನೆ ಗಿಳಿಮರಿಯ ಕಿವಿದೆರೆಗೆ ಬೀಳುವುದೊಂದೇ ತಡ, ಆ ಪುಟ್ಟಪಕ್ಷಿಯಪ್ರಾಣಪಕ್ಷಿ ಪ್ರಯಾಣಗೈದಿತ್ತು ನಾರದರಿಗೆ ವಿಪರೀತ ದಿಗಿಲು, ಅಚ್ಚರಿಯ ಮೇಲೆ ಅಚ್ಚರಿ

ಕೃಷ್ಣನ ಬಳಿ ಸಾರಿ ಸಾದ್ಯಂತವಾಗಿ ಘಟಿಸಿದುದನ್ನೆಲ್ಲ ವಿವರಿಸಿದರು ಶ್ರೀಕೃಷ್ಣ, "ಅಯ್ಯೋಪಾಪ, ಗಿಳಿಮರಿ ಅಸು ನೀಗಿತೇ? ಇರಲಿಬಿಡು ಈ ಬಾರಿ, ಅದೋ ಅಲ್ಲಿ ಒಂದು ಗೋವು ಇದೀಗ ಕರುಹಾಕಿದೆ. ಅದನ್ನು ಒಂದು ಬಾರಿ ಕೇಳಿನೋಡಬಾರದೇಕೆ? ಬಹುಶಃ ಅದಾದರೂ ಉತ್ತರಿಸೀತು" ಎಂದ. ನಾರದರಿಗೆ ಸ್ವಲ್ಪ ಪೇಚಿಗಿಟ್ಟುಕೊಂಡಿತೇನೋ, "ಸ್ವಾಮಿ, ನನ್ನ ಪ್ರಶ್ನೆಕೇಳಿ, ಹುಳು, ಗಿಳಿ, ಉತ್ತರಿಸದೆ ಸತ್ತರೆ ನನಗೆ ಅಂಟಬಹುದಾದ ಪಾಪ, ಅದೇನು ಅಂಥ ಘೋರ ಪಾತಕವೆನಿಸದು ಆದರೆ ಒಂದು ವೇಳೆ ನಿನ್ನ ಪ್ರಶ್ನೆ ಕೇಳಿ ಆಕಳು ಕರು ಸತ್ತರೆ ಗೋಹತ್ಯಾಪಾಪಕ್ಕೆ ನಾನು ಗುರಿಯಾಗುವೆನಲ್ಲ. ದಯವಿಟ್ಟು ನನ್ನನ್ನು ಗೋಹತ್ಯಾಪಾತಕಿ ಎನಿಸಬೇಡವೋ" ಎಂದು ಅಂಗಲಾಚಿದರು ಶ್ರೀಕೃಷ್ಣ ವಾಡಿಕೆಯ ಹಸನ್ಮುಖತೆಯಿಂದ, "ನಾನಿರುವಾಗ, ನಿನಗೇತರ ಪಾಪದ ಭಯ! ಹೋಗು ಆ ಕರುವನ್ನು ಕೇಳಿ ಬಾ" ಎಂದ.

ನಾರದರಿಗೀಗ ನಿಜಕ್ಕೂ ಧರ್ಮಸಂಕಟ. ಪ್ರಶ್ನೆ ಕೇಳಿ 'ಗೋಹತ್ಯಾಪಾತಕಿ' ಎನಿಸಿಕೊಳ್ಳಲೇ? ಭಗವಂತನ ಆಜ್ಞೆ ಉಲ್ಲಂಘಿಸಿ 'ದೈವ ವಿದ್ರೋಹಿ' ಎನಿಸಿಕೊಳ್ಳಲೇ, ಎರಡೂ ಅನುಲ್ಲಂಘ್ಯ, ಅಷ್ಟೇ ಅವಶ್ಯ ಕೊನೆಗೂ ಗಟ್ಟಿ ಮನಸ್ಸು ಮಾಡಿಕೊಂಡು, ತನ್ನ ತಾಯಿಯ ಮೊಲೆವಾಲನ್ನು ಗುದ್ದಿ ಗುದ್ದಿ ಈಂಟುತ್ತ ಸಂತೋಷದಿಂದ ಬಾಲ ಅಲ್ಲಾಡಿಸುತ್ತಿದ್ದ ಗೋವತ್ಸವನ್ನು ನಾರದರು ತಮ್ಮ ಪ್ರಶ್ನೆಯಿಂದ ವಿಚಲಿತಗೊಳಿಸಿದಾಗ, ಆ ಕರುವೂ ತಕ್ಷಣ ನೆಲದ ಮೇಲೆ ಹೊರಳಾಡಿ, ಕಣ್ಣು ಬೆಳ್ಳಗೆಮಾಡಿ, ಕಾಲು ಸೆಟೆಸಿ, ನಾಲಗೆಯನ್ನು ಹೊರದೆಗೆದು ಜೀವ ಬಿಟ್ಟಿತು ನಾರದರ ಎದೆ ಧವಗುಟ್ಟಿತು. ಅಯ್ಯೋ, ಕೊನೆಗೂ ನನಗೆ ಗೋಹತ್ಯಾಪಾಪ ಅಂಟಿತಲ್ಲ ಎಂಬ ವ್ಯಥೆಯಿಂದ ಓಡೋಡಿ, ಏದುಸಿರು ಬಿಡುತ್ತ ಶ್ರೀಕೃಷ್ಣನ ಬಳಿಬಂದು, ಕರು ಜೀವ ಕಳೆದುಕೊಂಡುದುದನ್ನು ಕಂಬನಿದುಂಬಿದ ಕಂಗಳಿಂದ ಕನವರಿಸಿದಂತೆ ವರದಿ ಒಪ್ಪಿಸಿದರು

ಶ್ರೀಕೃಷ್ಣ ಗೋವತ್ಸ ಮರಣಿಸಿದುದಕ್ಕಾಗಿ ತುಂಬ ಪರಿತಪಿಸಿದವರಂತೆ ನಟಿಸುತ್ತ "ಪಾಪ, ಹೀಗಾಗಬಾರದಿತ್ತು" ಎಂದು ಅಂದು ನಾರದರನ್ನು ಸಂತೈಸಿ, "ಆದದ್ದಾಯಿತು ಚಿಂತಿಸಿ ಫಲವೇನು? ಇನ್ನು ಕೊನೆಯ ಪ್ರಯತ್ನವೊಂದನ್ನು ಮಾಡಿ ನೋಡು" ಎಂದು ನುಡಿದು, "ಅಗೋ ನೆರೆಯ ರಾಜ್ಯದ ರಾಜಧಾನಿಯಾದ ಪಕ್ಕದ ಪಟ್ಟಣದಲ್ಲಿ ಅಲ್ಲಿನ ಯುವ ರಾಜದಂಪತಿಗಳಿಗೆ, ಇದೀಗ ಪುತ್ರೋತ್ಸವದ ಪರಮಾನಂದಭರಿತ ಪ್ರಸಂಗ. ಹುಟ್ಟಿದ ಮಗುವನ್ನು ತೊಟ್ಟಿಲಲ್ಲಿಟ್ಟು ತೂಗಿ ತೂಗಿ ಜೋಗುಳ ಹಾಡುತ್ತಿದ್ದಾರೆ ಆ ಮಗುವನ್ನೊಂದು ಬಾರಿ ಕೇಳಿಬಿಡು, ಅದಾದರೂ ನಿನ್ನ ಪ್ರಶ್ನೆಗೆ ಖಚಿತವಾಗಿ ಉತ್ತರಿಸಿತೆಂಬ ಭರವಸೆ ನನಗೆ ಅದು ಹುಸಿಯಾಗದು" ಎಂದು ಹೇಳಿದ.

## ಶ್ರೀ ವೇಂಕಟೇಶ್ವರ ಕೇಂದ್ರ ಗ್ರಂಥಾಲಯ

## ಸಂಶೋಧನ ಕೇಂದ್ರ - ತಿರುಪತಿ

# ಒಂದು ವಿನಂತಿ

1993 ರಲ್ಲಿ ತಿ.ತಿ.ದೇ ಆಡಳಿತ ಮಂಡಳಿಯ ವಜ್ರಮಹೋತ್ಸವ ವರ್ಷದಲ್ಲಿ ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ, ಸಂಶೋಧನ ಕೇಂದ್ರವನ್ನು ನೆಲೆಗೊಳಿಸಿ ಅದನ್ನು ಸ್ವಾಮಿ ಭಕ್ತರ ಸೇವೆಯಲ್ಲಿ ಸಮರ್ಪಿಸಲಾಯಿತು ನಮ್ಮ ಪರಂಪರೆಯ ವಾಸ್ತು ಶಿಲ್ಪದ ಹಾಗೂ, ಆಧುನಿಕ ವಾಸ್ತು ಶಾಸ್ತ್ರದ ಉತ್ತಮಾಂಶಗಳನ್ನು ಒಳಗೊಂಡು ನಿಂತಿರುವ ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಅಪೂರ್ವ ಪುಸ್ತಕಾಗಾರವಾಗಿ ವೇದೋಪನಿಷತ್ತುಗಳ, ಇತಿಹಾಸ ಪುರಾಣಗಳ, ಶಾಸ್ತ್ರ ಭಗವದ್ಗೀತೆಗಳ ಉಪಾದೇಯವೂ ಭವ್ಯವೂ ಆದ ಸಂದೇಶವನ್ನು ಪ್ರಸಾರಮಾಡುವ ಉದ್ದೇಶ ಹೊಂದಿದೆ.

ಸನಾತನ ಧರ್ಮದ ವೈವಿಧ್ಯಮಯ ಮುಖಗಳ, ಭಾರತೀಯ ಚಿಂತನ ಶೀಲತೆಯ, ತತ್ತ್ವ ಧರ್ಮ, ಸಂಗೀತವೇ ಮೊದಲಾದ ಪರಂಪರಾಗತ ಸಂಪದ್ಭರಿತ ಸಂಸ್ಕೃತಿಯಲ್ಲಿ ಸಂಶೋಧನೆ ನಡೆಸಲು ಅವಕಾಶವನ್ನು ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಕಲ್ಪಿಸುವುದು ಭಾರತೀಯ ಶಾಸ್ತ್ರದ ಬಗ್ಗೆ ಅಪರೂಪವೂ, ಅಮುದ್ರಿತವೂ ಆದ ಅಂಶಗಳನ್ನು ಪ್ರಕಟಿಸುವುದೂ, ಸಂಸ್ಕೃತ ಪಾಠಗಳ ಮೂಲ ಪ್ರತಿಗಳನ್ನೂ ಅವುಗಳ ಸರಳಾನುವಾದಗಳನ್ನೂ ಪ್ರಕಟಿಸುವುದೂ, ನಮ್ಮ ಉದ್ದೇಶವಾಗಿದೆ. ಈ ಪುಸ್ತಕ ಭಂಡಾರವು ಭಾರತೀಯ ಸಂಸ್ಕೃತಿಯ ದೇವಾಲಯವಾಗಿ, ಶಿಕ್ಷಣ, ಸಂಶೋಧನೆಯ ಮಹತ್ ಸಂಸ್ಥೆಯನ್ನಾಗಿ ಮಾಡುವುದೇ ನಮ್ಮ ಪವಿತ್ರತಮ ಕರ್ತವ್ಯವಾಗಿದೆ ಇಡೀ ಯೋಜನೆ ಸಾಕಷ್ಟು ಸಂಪನ್ಮೂಲವನ್ನು ಅಪೇಕ್ಷಿಸುತ್ತದೆ.

ಹೀಗಾಗಿ, ಸಾರ್ವಜನಿಕರಲ್ಲಿ, ಸ್ವಯಂಸೇವಾ ಸಂಸ್ಥೆಗಳಲ್ಲಿ ಧನದ ರೂಪದಲ್ಲಿ ಆಗಲೀ, ಪುಸ್ತಕ ರೂಪದಲ್ಲಿಯಾಗಲೀ ಉದಾರವಾದ ದೇಣಿಗೆಗಳನ್ನು ನೀಡಬೇಕೆಂದು ಮನವಿ ಮಾಡುತ್ತೇವೆ.

ವ್ಯಕ್ತಿಗಳು ಹಾಗೂ ಸಂಸ್ಥೆಗಳು ತಮ್ಮಲ್ಲಿನ ಅಪರೂಪದ ಪುಸ್ತಕಗಳನ್ನೂ ಗ್ರಂಥಾಲಯಕ್ಕೆ ನೀಡಬಹುದು

ತಮ್ಮ ಎಲ್ಲ ದೇಣಿಗೆಗಳನ್ನು ಪುಸ್ತಕವಾಗಲೀ, ಹಣವಾಗಲೀ ಕಳುಹಿಸಬೇಕಾದ ವಿಳಾಸ - ವಿಶೇಷಾಧಿಕಾರಿ, ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಹಾಗೂ ಸಂಶೋಧನ ಕೇಂದ್ರ - ತಿರುಪತಿ - 517 502.

---

ನಾರದರೀಗ ಖಿಡಾಖಂಡಿತವಾಗಿ ಒಲ್ಲೆನ್ನುವ ಅರ್ಥದಲ್ಲಿ ಕತ್ತಲುಗಿಸಿ, ನೆಲನೋಡುತ್ತ, ಅಧೋವದನನಾಗಿ "ಅಪರೂಪವಾಗಿ ಬಹುಕಾಲದ ಮೇಲೆ ಜನಿಸಿದ ಆ ರಾಜಕುವರ ಒಂದು ವೇಳೆ, ಹುಳು, ಗಿಳಿ, ಕರುಗಳಂತೆ ಪ್ರಾಣಬಿಟ್ಟರೆ ರಾಜಭಟರು ನನ್ನ ಪ್ರಾಣವನ್ನೇ ತೆಗೆದಾರು. ಶೂಲಿ ಶೂಲಕ್ಕೇರಿಸಿಯಾರು. ನಾನೊಲ್ಲೆನಯ್ಯ, ನನ್ನ ಪ್ರಶ್ನೆಗೆ ಉತ್ತರ ಬಾರದಿದ್ದರೂ ಪರವಾಗಿಲ್ಲ, ಸಾಕು, ನಾನಿನ್ನು ಹೊರಟೆ" ಎಂದು ಹೇಳುತ್ತ ನಿರ್ಗಮಿಸಲಣಿಯಾಗುವುದನ್ನು ಕಂಡ ಕೃಷ್ಣ ನಾರದರು ಹೊದ್ದ ಉತ್ತರೀಯವನ್ನೇ ಜಗ್ಗಿ ಹಿಡಿದು ನಿಲ್ಲಿಸಿ, "ಏಕೀ ಪಲಾಯನ ಪ್ರವೃತ್ತಿ? ನಿನ್ನ ಪ್ರಶ್ನೆಯಿಂದ ಲೋಕಕಲ್ಯಾಣಕಾರಕ ಸಂದೇಶವೊಂದು ಪ್ರಚುರಗೊಳ್ಳಬೇಕಿದೆ. ಬಾ ಧೈರ್ಯದಿಂದ ಹೋಗಿ ಆ ರಾಜಕುವರನನ್ನು ಕೇಳಿಬಾ ನಾ ನಿರುವಾಗ ನಿನಗಾರ ಭಯ?" ಎಂದು ಹುರುದುಂಬಿಸಿ, ಪುಸಲಾಯಿಸಿ ರಾಜನರಮನೆಗೆ ಕಳಿಸಿಕೊಟ್ಟ.

ನಾರದರು ಅಂಜುತ್ತ ಅಳುಕುತ್ತ, ಹೆಜ್ಜೆಯ ಮೇಲೆ ಕಳ್ಳ ಹೆಜ್ಜೆ ಇಕ್ಕುತ್ತ, ಯಾರ ಕಣ್ಣಿಗೂ ಬೀಳದೆ, ತುಂಬ ಪ್ರಯಾಸದಿಂದ, ಕಾವಲು ಭಟ್ಟರ ಕಣ್ಣು ತಪ್ಪಿಸಿ, ಅಂತಃಪುರದಲ್ಲಿ ಪ್ರವೇಶಿಸಿದರು ಕಾಲುಗೆಜ್ಜೆ ಘಲುಕೆನಿಸುತ್ತ ಕೈಯ ಕಂಕಣದ ಕಿಂಕಿಣಿನಾದ ಗೈಯುತ್ತ ಬಾಲಕೇಳಿಯಲ್ಲಿ ಲೀನವಾದ, ತೊಟ್ಟಿಲಲ್ಲಿದ್ದ ನಸುನಗೆಯ ಮುದ್ದು ಮೊಗದ ರಾಜರಾಜಪುತ್ರ ರಂಜನೀಯವಾಗಿ ಶೋಭಿಸುತ್ತಿದ್ದ ನಾರದರು ಉಸಿರು ಬಿಗಿಹಿಡಿದು, ಕಣ್ಣುಮುಚ್ಚಿ, ದೃಢ ನಿರ್ಧಾರಮಾಡಿಕೊಂಡು, ಒಂದೇ ಉಸಿರಿನಲ್ಲಿ "ಮಗೂ ಸಜ್ಜನರ ಸಂಗದ ಸತ್ಫಲವೇನು ?" ಎಂದು ಕೇಳಿ, ಮುಂದಾಗಬಹುದಾದ ಅನಾಹುತವನ್ನು ತಮ್ಮಿಂದ ನೋಡಲಾಗದೇನೋ ಎಂಬ ಕಳವಳ ಭರಿತ ಕಾತರತೆಯಿಂದ ಕಾಲ್ತೆಗೆಯುವ ಸನ್ನಾಹದಲ್ಲಿರುವಾಗಲೇ ತೊಟ್ಟಿಲಲ್ಲಿದ್ದ ಪುಟ್ಟ ಶಿಶು ಮಾಯವಾಗಿ ನಾರದರೆದುರು ದಿವ್ಯದೇಹ ಧರಿಸಿ ಸರ್ವಾಲಂಕಾರ ಭೂಷಿತನಾಗಿ ನಿಂತ ಗಂಧರ್ವ ಕಂಡುಬಂದನು ಆತ ವಿನೀತಭಾವದಿಂದ ಶಿರಬಾಗಿ ನಾರದರಿಗೆ ಭಕ್ತಿಯಿಂದ ಪ್ರಣಾಮಮಾಡಿ, "ಸ್ವಾಮಿ, ಅದಾವುದೋ ಪಾಪ ಕರ್ಮವೆಸಗಿದ ಪ್ರಯುಕ್ತ ಶಾಪಗ್ರಸ್ತನಾಗಿ ಶತಪಾದಿಯ ಜನ್ಮ ತಳೆದಿದ್ದೆ ತಮ್ಮಂತಹ ಸಜ್ಜನರು ಆ ಜನ್ಮದಲ್ಲಿ ದರ್ಶನವಿತ್ತು ಕ್ಷಣಕಾಲ ಸಂಗ ದೊರೆತ ಫಲವಾಗಿ ಶುಕವಾಗಿ ಜನಿಸಿದೆ. ಆಗಲೂ ಪುನಃ ದರ್ಶನವಿತ್ತಿರಿ ತಮ್ಮ ಪಾವನಕರ ಸಂಗ ನಿಮಿಷ ಕಾಲ ಘಟಿಸಿದರೂ ಅದರ ಫಲವಾಗಿ ಗೋವತ್ಸವಾಗಿ ಜನ್ಮತಳೆದೆ. ಆಗಲೂ ದಯಾಳುವಾದ ತಾವು ಕೃಪೆದೋರಿ ಆದ ಅತ್ಯಲ್ಪಕಾಲ ಸಹವಾಸದ ಫಲವಾಗಿ ರಾಜವಂಶದಲ್ಲಿ ಜನಿಸುವ ಯೋಗ ನನ್ನದಾಯಿತು ಈಗಲೂ ಸಹ ಚಣಕಾಲ ತಮ್ಮ ಪವಿತ್ರಸಂಗದೊರೆತು ತತ್ಫಲವಾಗಿ ನನ್ನ ಶಾಪವಿಮೋಚನೆಗೊಂಡು, ನನ್ನ ಮೂಲರೂಪ ಪ್ರಾಪ್ತವಾಗಿ ನಾನು ನನ್ನ ಲೋಕಕ್ಕೆ ಹೋಗಿ ಸೇರುವಂತಾಯಿತು. ಸಜ್ಜನರ ಸಂಗ ಎಷ್ಟೇ ಅತ್ಯಲ್ಪಕಾಲ ಲಭಿಸಿದರೂ ಅದು ಮಹತ್ ಸತ್ಫಲವನ್ನು ನೀಡುವುದೆಂಬುದಕ್ಕೆ ನಾನೇ ನಿದರ್ಶನನಾಗಿರುವಾಗ ದೇರೆ ಸಾಕ್ಷಿ ದೇಕೆ ತಕ್ಕೆ? ನಿಮಗೆ ಇನ್ನೊಮ್ಮೆ ನನ್ನ ಅನಂತಾನಂತ ಪ್ರಣಾಮಗಳು ಪುನರ್ದರ್ಶನಂ ಭೂಯಾತ್" ಎಂದು ಹೇಳಿ ಅದೃಶ್ಯನಾದ.

ನಾರದರಿಗೆ ತಮ್ಮ ಪ್ರಶ್ನೆಗೆ ಉತ್ತರ ದೊರಕುವುದರೊಂದಿಗೆ ದಿವ್ಯಜ್ಞಾನ ಉದಿಸಿತ್ತು. ಶ್ರೀಕೃಷ್ಣ ಮಾತ್ರ ದೂರದಲ್ಲಿ ನಿಂತುಕೊಂಡು, ತಂಬೂರಿ ಮೀಟುತ್ತ ಹರಿನಾಮ ಉಚ್ಚರಿಸುತ್ತ ಬರುತ್ತಿರುವ ನಾರದರನ್ನು ಕಂಡು ತಾನು ತನ್ನ ಮನದಲ್ಲೇ ಮುಸಿಮುಸಿ ನಗುತ್ತಿದ್ದ.

* * *

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಆಲಯಾಡಳಿತ

ಆಂಗ್ಲ ಮೂಲ - ಡಾ|| ಎನ್. ರಮೇಶನ್.

ಕನ್ನಡಾನುವಾದ - ಬಿ. ಎನ್. ಶ್ರೀನಿವಾಸನ್.

(ಮುಂದುವರೆದಿದೆ)

### ಸ್ಥಾನತ್ತಾರರು

ಕಾರ್ಯನಿರ್ವಾಹಕರು : ಪ್ರಾಚೀನ ಹಾಗೂ ವಿಜಯನಗರ ದರಸರ ಕಾಲದ ಶಾಸನಗಳಲ್ಲಿ ಪದೇ ಪದೇ ಕಂಡುಬರುವ 'ಸ್ಥಾನತ್ತಾರ್' ಎಂಬ ಸಮಿತಿಯು ಆಲಯದ ದೈನಂದಿನ ಆಡಳಿತವನ್ನು ವ್ಯವಸ್ಥಿತವಾಗಿ ನಡೆಸಿಕೊಂಡು ಹೋಗುವ ಒಂದು ಸ್ಥಳೀಯ ಸಮಿತಿ ಆಗಿದ್ದಿತು ಇದೊಂದು ಜಾತ್ಯತೀತ ಸಂಸ್ಥೆಯಾಗಿದ್ದರೂ ಈ ಸಮಿತಿಯಲ್ಲಿನ ಹಲವರು ಆಲಯದ ಕೆಲವು ಧಾರ್ಮಿಕ ಕ್ರಿಯಾಕಲಾಪಗಳನ್ನು ನಡೆಸುತ್ತಿದ್ದರು ಒಟ್ಟಿನಲ್ಲಿ ಆಲಯದ ವಿಚಾರದಲ್ಲಿ ಸ್ಥಳೀಯ ರಾಜರ ಪರವಾಗಿ ಶ್ರೀಕಾರ್ಯವನ್ನು ನಿರ್ವಹಿಸುವ ಸಾರ್ವಜನಿಕ ಸೇವಾರಂಗದ ಉನ್ನತವಾದ ಸಮಿತಿಯೆಂಬ ಗೌರವಕ್ಕೆ ಪಾತ್ರವಾಗಿದ್ದಿತು ಮೊದಲಿಗೆ ಆಲಯದ ವಿಚಾರದಲ್ಲಿ ಸೀಮಿತವಾದ ಕೆಲಸಗಳನ್ನು ಮಾತ್ರವೇ ಮಾಡುವಂತಿದ್ದರೂ, ನಂತರದ ಕಾಲದಲ್ಲಿ ಮುಖ್ಯವಾಗಿ ವಿಜಯನಗರದರಸರ ಕಾಲದಲ್ಲಿ ಈ ಸಮಿತಿಯ ಸ್ವರೂಪ ಹಾಗೂ ಕಾರ್ಯಕ್ಷೇತ್ರಗಳು ವಿಸ್ತಾರವಾಗಿ ಧರ್ಮದರ್ಶಿಗಳ ಸ್ಥಾನದಲ್ಲಿಯೂ ಕೆಲಸ ಮಾಡುವಂತೆ ಆಯಿತು ಆಲಯದ ಆಸ್ತಿ ಪಾಸ್ತಿಗಳ ಹಾಗೂ ಆಲಯದ ಜವಾಬ್ದಾರಿಯನ್ನೂ ಹೊರುವಂತೆ ದಾನ ದತ್ತಿಗಳನ್ನು ಸ್ವೀಕರಿಸುವ, ಅವುಗಳು ಸಕ್ರಮವಾಗಿ ಬಳಕೆಗೆ ಬಂದು ಹೆಚ್ಚಿನ ಉತ್ಪನ್ನ ಆಲಯಕ್ಕೆ ಸಿಗುವಂತೆ ಮಾಡುವ ಹಾಗೂ ಈ ದಾನಗಳನ್ನು ಸರಿಯಾಗಿ ನಿರ್ವಹಿಸುವ ಜವಾಬ್ದಾರಿಯನ್ನೂ ಪಡೆಯುವಂತೆ ಆಯಿತು

ಶಾಸನಗಳಲ್ಲಿ ನಮಗೆ ದೊರೆಯುವ ಮೊದಲನೆಯ ಆಡಳಿತ ಯಂತ್ರಾಂಗವೆಂದರೆ ಆಲಯದಲ್ಲಿ ಉತ್ಸವ ಮೂರ್ತಿಯನ್ನು ಸ್ಥಾಪಿಸಿ, ಅದಕ್ಕಾಗಿ ಉತ್ಸವವನ್ನು ನಿರ್ವಹಿಸಲು ವ್ಯಾಪಕವಾದ ಆಸ್ತಿಯನ್ನು ದಾನವಾಗಿ ನೀಡಿದ ಪಲ್ಲವರಾಣಿ ಸಾಮವೈ ಹಾಕಿಸಿದ ಶಾಸನದಲ್ಲಿ ಕಂಡುಬರುವಂತಹದ್ದೇ ಆಗಿದೆ. ಈ ಯಂತ್ರಾಂಗವನ್ನು - ಮಡಪತ್ಯಾರ್ ಸೆಯ್ಯುವಾರ್ ಎನ್ನಲಾಗಿದೆ ಎಂದರೆ ತಿರುವೆಂಗಡನಾಥನ ಆಲಯದಲ್ಲಿ ಮಠಾಧಿಪತ್ಯವನ್ನು ಮಾಡುತ್ತಿದ್ದವರೆನ್ನಬಹುದು. ಇವರ ಅಧಿಕಾರದ ಬಗ್ಗೆ ಖಚಿತವಾದ ವಿವರಣೆ ಇಲ್ಲವಾದರೂ ಆಲಯದ ಆಡಳಿತಾಧಿಕಾರಿಗಳು ಎಂದು ತಿಳಿಯಬಹುದಾಗಿದೆ.

ಚೋಳರ ಆಡಳಿತಕಾಲದಲ್ಲಿಯೂ ಇದೇ ರೀತಿಯ ಮಠ ಪತ್ಯಂ ಸೆಯ್ಯುವಾರ್ - ಮಠಾಧಿಪತ್ಯ ಮಾಡುವವರು - ಆಲಯದ ಸೇವೆ, ಆಡಳಿತವನ್ನು ನಡೆಸುವ ಹೊಣೆಯವರಾಗಿದ್ದು, ಆಲಯದ ದಾನ ದತ್ತಿಗಳ ಆಸ್ತಿಗಳ ಧರ್ಮದರ್ಶಿಗಳಾಗಿದ್ದರು. ರಾಜನ ಪ್ರತಿನಿಧಿಗಳು ಇವರ ಮೇಲೆ ಪೂರ್ಣ ಅಧಿಕಾರವನ್ನು ಹೊಂದಿದ್ದವರಾಗಿದ್ದರು ಇದು ಜೆ.ಟಿ. 126 ನೇ ಶಾಸನದಂತೆ ಸಿದ್ಧವಾಗುತ್ತದೆ. ಈ ಶಾಸನವನ್ನು ರಾಜರಾಜ ಚೋಳನ ಆಜ್ಞೆಯಂತೆ ಲಿಖಿಸಲಾಗಿದ್ದು ಇದರ ವಿವರ ಹೀಗಿದೆ-

ರಾಜನು ಈ ಹಿಂದೆಯೇ ಬಾಯಿಮಾತಿನ ಮೂಲಕ ನೀಡಿದ ಆದೇಶದ ಪ್ರಕಾರ ತ್ರಿಭುವನ ಚಕ್ರವರ್ತಿಗಳಾದ ಶ್ರೀ ರಾಜರಾಜದೇವರ ಆಡಳಿತದ 19 ನೇ ವರ್ಷದ ಕಾರ್ತೀಕ ಮಾಸದಲ್ಲಿ ಪೆರಿಯ ನಾಟ್ಟವರಾದ ನಾವು ತಿರುಸುಖನೂರಿನ (ತಿರುಚಾನೂರು) ಆಲಯಕ್ಕೆ ಸೇರಿದ ಸಭಾಮಂದಿರದಲ್ಲಿ ಎಲ್ಲ ಸದಸ್ಯರೂ - ಯಾವೊಬ್ಬ ಸಹಾಯಕರನ್ನೂ ಬಿಡದೆ - ಸಮಾವೇಶವಾಗಿ, ಶ್ರೀ ಶಠಗೋಪದಾಸರ್ ಪಿಳ್ಳೈ, ಅರುವರ್ಯೆಯನ್ನೆಯ ಕೋಯಿಲ್ ಪಿಳ್ಳೈ ಹಾಗೂ ಕಲಿಕನ್ರಿದಾಸರ್ ಪಿಳ್ಳೈಗಳು ನೀಡಿದ ಬಿನ್ನವತ್ತಳೆಯ ಬಗ್ಗೆ ವಿಚಾರಿಸಿ ಏಕಕಂಠರಾಗಿ ನಿರ್ಣಯಿಸಿರುವೆವು. ಅದೆಂದರೆ ವಿಷ್ಣುವಿನ ಸುಧಾವಿಗ್ರ



ತವನ್ನು ಒಳಗೊಂಡ ಶ್ರೀ ಗೋವಿಂದರಾಜಸ್ವಾಮಿ ಆಲಯದಲ್ಲಿ ಪೆರಿಯ ನಾಟ್ಟಾರರು ಸ್ಥಾಪಿಸಿದ ತಿರುಮಂಗೈ ಆಳ್ವಾರ ವಿಗ್ರಹದ ನಿವೇದನೆಯಲ್ಲಿ ದಿನವೂ ಅಮುದಪ್ಪಡಿ ಹಾಗೂ ಸಾತ್ತುಪ್ಪಡಿಗಳನ್ನು ಏರ್ಪಡಿಸಲು, ತಿರುಚ್ಚುಕನೂರು ಉಡುಪನ ಪಕ್ಷಿಮದಲ್ಲಿ ನಾಲ್ಕು ರಸ್ತೆಗಳು ಕೂಡುವೆಡೆಯಲ್ಲಿರುವ ಮಂಟಪ ಕೋಟೆಯ ಉತ್ತರಕ್ಕೆ..... ದ ಪೂರ್ವಕ್ಕೆ ಕಿರಂದಯೇರಿಯ ದಕ್ಷಿಣಕ್ಕೆ ಇರುವ ಪಟ್ಟಿಗೆ ಐದು ತುಂಬು ಭತ್ತ ದಳೆಯುವ ಭೂಮಿಯನ್ನು ಕೊತ್ತಗಾಳುವ ನೀರಿನಿಂದ ಧಾರೆಯೆರೆದು ಕೊಟ್ಟದ್ದನ್ನು ಗಮನಿಸಿದ್ದೇವೆ. ಹಾಗೂ ಈ ಆದಾಯವನ್ನು ತಿರುವೆಂಕಟಮುಡಿಯಾನನ ಆಲಯದ ಭಂಡಾರಂಗಳು ಶ್ರೀ ಗೋವಿಂದ ರಾಜ ಪೆರುಮಾಳ್ ಆದಾಯದೊಡನೆಯೇ ವಸೂಲಿ ಮಾಡಿ, ಸೂರ್ಯಚಂದ್ರರಿರುವರೆಗೆ ಈ ದಾನವನ್ನು ರಕ್ಷಿಸತಕ್ಕದ್ದು.

"ಈ ದಾನದ ಏರ್ಪಾಡಿಗೆ ವಿಘ್ನ ತಂದವನು ಗಂಗಾನದಿಯ ದಡದಲ್ಲಿ ಬಿಳಿಯ ಹಸುವನ್ನು ಕೊಂದ ಪಾಪಕ್ಕೆ ಒಳಗಾಗುತ್ತಾನೆ.

"ಪೆರಿಯ ನಾಟ್ಟವರಾದ ನಾವು ಈ ವ್ಯವಹಾರಕ್ಕೆ ಸಾಕ್ಷಿಯಾಗಿದ್ದೇವೆ ಹಾಗೂ ಇದು ಪೆರಿಯ ನಾಟ್ಟವೇಲನ ಮೊಹರಿನ ಸಹಿ."

ಅತಿ ಪ್ರಾಚೀನ ಕಾಲದಿಂದಲೂ ಸ್ಥಾನಿಕರು, ಸ್ಥಳೀಯ ಸೇವಾದಾರರು ಇದ್ದಂತೆ ಕಾಣಬರುತ್ತದೆ. ಇದನ್ನು ತಿರುಕಾಳಹಸ್ತಿ ದೇವನ 170 ತಿ.ತಿ. ಶಾಸನವು ಖಚಿತಪಡಿಸುತ್ತದೆ. ಸದರಿ ಶಾಸನದ ಪಾಠ ಹೀಗೆ ನಡೆಯುತ್ತದೆ.

"ತಿರುಮಲೆಯ' ಸ್ಥಾನತ್ತಾರರ ಬೇಡಿಕೆಯಂತಾಗಿ ತಿರುವೆಂಕಟ ಮುಡಿಯಾನನ ಆಲಯದಲ್ಲಿ ಈ ಏರ್ಪಾಡುಗಳನ್ನು ಮಾಡಲಾಗಿದೆ.

"ಸಕಲ ಭುವನಾಶ್ರಯನೂ, ವಿದ್ಯಾರಣ್ಯದ ಕೋಗಿಲೆಯೂ, ಶ್ರೀಕಾಳಹಸ್ತೀಶ್ವರ ಚರಣ ಸರೋಜ ಭೃಂಗನೂ, ವಂಗಿ ಪ್ರಭುವೂ, ಪಿಡಾರದೇವಿಯ ಅನುಗ್ರಹ ಪಡೆದವನೂ, ಗೋದಾವರಿಯರಸನೂ, ಉತ್ತಮ ನಗರವಾದ ಕಾನುಪಾಕದ ಪ್ರಭುವೂ, ವಿದ್ವಾಂಸರಲ್ಲಿ ಅತಿಶ್ರೇಷ್ಠನೂ, ಯುದ್ಧದಲ್ಲಿ ಸೋತ ರಾಜನ ನಗರವಾದ ಗೋಪಿಕಾ ಪುರದ ಕ್ರೀಡಾಕಾರನೂ ಚಂದ್ರವಂಶದ ಆಭರಣವೂ, ಚಾಲುಕ್ಯನಾರಾಯಣನೂ, ಸಕಲ ಗುಣಗಣಿಯೂ ಮಹಾರಾಜಾಧಿರಾಜನೂ ಯಾದವರಾಜನೂ, ಶ್ರೀಮದ್ಭುಜಬಲನೂ ಆದ ತಿರುಕಾಳಹಸ್ತಿ ದೇವ ಯಾದವರಾಯನಾದ ನಾನು ಸ್ಥಾನತ್ತಾರರ ಬೇಡಿಕೆಯಂತೆ ತಿರುವೆಂಕಟ ಮುಡಿಯಾನನ ಆಲಯಕ್ಕಾಗಿ ನೀಡುವ ಆಜ್ಞೆಯೆಂದರೆ-

ಅವಿಲಾಲಿ ನಾಡಿನ ಪಂಚಾಯತಿ ಸಭೆಯಲ್ಲಿ ನನ್ನ ಆಡಳಿತದ 19 ನೇ ವರ್ಷದಲ್ಲಿ ತಿರುವೆಂಕಟ ಮುಡ್ಯಯಾನನ ಆಲಯದಲ್ಲಿ ನಿಮಂದನಗಾಗಿ ದೇವದಾನವು ನಿರಂತರವಾಗಿ ನಡೆಯಲೆಂದು ಭೂಮಿಯನ್ನು ಧಾರೆಯೆರದು ನೀಡುವಾಗ ಕುಡವೂರು ನಾಡಿನ ನಾಲ್ಕೂ ಗಡಿಗಳ ಒಳಗೆ ಇರುವ ಎಲ್ಲ ಭೂಮಿಯನ್ನೂ ಅದರ ಮೇಲೆ ಸಂದಾಯವಾಗುವ ಎಲ್ಲ ತೆರಿಗೆ ಸುಂಕಗಳೊಡನೆ - ಕಡಮೈ ಆಯ, ಪಡಿಕಾವಲ್, ವೆಟ್ಟಿಚರಿಗೆ, ಕೋಲ್‌ವರಿ, ಪಟ್ಟಂ ಪೊನ್, ಪೊನ್‌ವರಿ, ಕಾಣಿಕ್ಕೆ, ಪೊರ್‌ಕಲಂಗಳ - ಮೊದಲಾದ ಎಲ್ಲ ತೆರಿಗೆಗಳೊಡನೆ ನೀಡುತ್ತ ಈ ಭೂಮಿಯ ಗಡಿಗಳಲ್ಲಿ ಸುದರ್ಶನ ಕಲ್‌ಗಳನ್ನು (ವಿಷ್ಣುಚಕ್ರ ಕೆತ್ತಿದಗಡಿಯ ಕಲ್ಲುಗಳು) ನಡಿಸಬೇಕೆಂದು ಆಜ್ಞೆ ಮಾಡುತ್ತೇನೆ ಈ ಆಜ್ಞೆ ಜಾರಿಗೆ ಬರಲಿ"

ಎಲ್ಲ ಶಾಸನಗಳಲ್ಲಿಯೂ ಕಂಡುಬರುವ ಭಾಷೆಯ ಪ್ರಕಾರ ಈ ಜಮೀನುಗಳನ್ನು ಸ್ಥಾನತ್ತಾರರಿಗೆ ಒಪ್ಪಿಸಲಿಲ್ಲವೆಂಬುದನ್ನು ನೋಡಬಹುದು. ಮತ್ತೊಂದು ದಿಕ್ಕಿನಲ್ಲಿ ಇಂತಹ ಎಲ್ಲ ಭೂಮಿಯೂ ಆಲಯದ ಶ್ರೀ ಭಂಡಾರಕ್ಕೆ ಸೇರಿದುವೆಂಬುದು ಸ್ಪಷ್ಟವಾಗುತ್ತದೆ. ಈ ಭೂಮಿಗಳಲ್ಲಿನ ಆದಾಯವನ್ನು ಮಾತ್ರವೇ ಸ್ಥಾನತ್ತಾರರು ಅಂದಂದಿನ ವೆಚ್ಚಗಳಿಗಾಗಿ ಸ್ವೀಕರಿಸುವಂತಿದ್ದಿತು ಹೀಗಾಗಿ ಸಾರ್ವಜನಿಕ ಕೆಲಸಗಳಿಗೆಂದು ನೀಡಲಾದ ದಾನಗಳಲ್ಲವೂ 'ತಿರುಪ್ಪಣಿ ಭಂಡಾರ'ಕ್ಕೆ ಸೇರುತ್ತಿದ್ದುವು. ಇದರಿಂದಾಗಿ ಈ ಕಾಲದಲ್ಲಿ ಸ್ಥಾನತ್ತಾರರು ಆಲಯದ ಆಸ್ತಿಪಾಸ್ತಿಗಳಿಗೆ ಧರ್ಮದರ್ಶಿಗಳಂತಲ್ಲದೆ ನಿರ್ವಾಹಕರಾಗಿ ಮಾತ್ರವೇ ಅಧಿಕಾರ ಪಡೆದಿದ್ದರೆಂದು ಕಂಡುಬರುತ್ತದೆ

ದತ್ತಿಗಳ ಮೇಲಿನ ಪ್ರಭುತ್ವ : ದಾನ ದತ್ತಿಗಳೆಲ್ಲವುಗಳ ಮೇಲೆ ಸ್ಥಳೀಯ ರಾಜರ ಸಂಪೂರ್ಣ ಪ್ರಭುತ್ವ ಇದ್ದಿತೆಂಬುದು ಶಾಸನಗಳಿಂದ ಸ್ಪಷ್ಟವಾಗುತ್ತದೆ. ಜೆ.ಟಿ 11 ನೇ ಶಾಸನ ಹೀಗಿದೆ.

"ತ್ರಿಭುವನ ಚಕ್ರವರ್ತಿ ಶ್ರೀ ತಿರುವೆಂಕಟನಾಥ ಯಾದವರಾಯರ ಆಡಳಿತದ 12 ನೇ ವರ್ಷದ ಪಂಗುನಿ ಮಾಸದ ಒಂದು ದಿನ ಈ ಮೊದಲು ತಿರುವೆಂಕಟಮುಡ್ಯಯಾನನಿಗೆ ನೀಡಿದ ತಿರುಪತಿಯನ್ನು ರಾಜಶಾಸನದಿಂದಾಗಿ ತಿರುವಿಡೈಯಾಟ್ಟಂ ತಿರುಮತ್ತುಕ್ಕನಿಯೆಂದು ಸರ್ವಮಾನ್ಯ ಗ್ರಾಮವಾಗಿ ಪರಿವರ್ತಿಸಲಾಗಿದೆಯೆಂದು ತಿರುಮಲೆಯ ಸ್ಥಾನತ್ತಾರರಿಗೆ ಈ ಮೂಲಕ ತಿಳಿಸಲಾಗಿದೆ.

"ನಾವು ಇದುವರೆಗ ಈ ಗ್ರಾಮದಲ್ಲಿ ವಸೂಲು ಮಾಡುತ್ತಿದ್ದ ಕಳಕಂಡ ತೆರಿಗೆಗಳನ್ನು ರಾಜನ ಆಡಳಿತದ ಹನ್ನೆರಡನೆಯ ವರ್ಷದ ಚಿತ್ತಿರೈ ಮಾಸದಿಂದ ನಾರಾಯಣಸಂಧಿಯ ಅಮುದಪ್ಪಡಿ ಸಾತ್ತುಪ್ಪಡಿಗಳ ಸಾಮಗ್ರಿಗಳಿಗಾಗಿ ಬಳಸಬೇಕೆಂದು ಆಜ್ಞಾಪಿಸಲಾಗಿದೆ. ಇದಕ್ಕಾಗಿ ಈ ಸೂರ್ಯಚಂದ್ರರಿರುವ ತನಕ ನಡೆಯಬೇಕೆಂದು ಸದರಿ ಗ್ರಾಮವನ್ನು - ತಿರುಪತಿಯನ್ನು-ಸರ್ವಮಾನ್ಯಗ್ರಾಮವೆಂದು ಘೋಷಿಸಲಾಗಿದೆ. ಈ ತಿರುವಾರಾಧನೆಯು ಇಂದಿನಿಂದ ನಿರಂತರವಾಗಿ ನಿಲ್ಲದಂತೆಯೂ, ಕೊರೆಯಾಗದಂತೆಯೂ ನಡೆಯಬೇಕೆಂದು ಆಜ್ಞಾಪಿಸಲಾಗಿದೆ. ಈ ಶಾಸನವನ್ನು ತಾಮ್ರ ಪತ್ರದಲ್ಲಿಯೂ, ಕಲ್ಲಿನಲ್ಲಿಯೂ ಕೆತ್ತಬೇಕು."

ವಸೂಲಾಗುತ್ತಿದ್ದ ತೆರಿಗೆಗಳು : ಪಂಡಿವರಿ, ಪಳವರಿ, ಕಾಣಿಕ್ಕೈ, ವೇಂಡುಕೊಳ್‌ವರಿ, ಮಾಳೈ ಅಮಂಜೆ, ಕುದಿರೈವರಿ, ಕಸಾಕ್ಕಮೋವಿ, ನಾಟ್ಟುವರಿ, ನಿಲಕ್ಕಾಣಿಕ್ಕೈ, ನಾಟ್ಟಾರ್ ವಿಟ್ಟಕಾಣಿಕ್ಕೈ, ವಳಿನಡೈಕಾಣಿಕ್ಕೈ, ಅರ್ಕ್ಕನ್ ಕಾಣಿಕ್ಕೈ, ಕಾರ್ತಿಕೈ ಕಾಣಿಕ್ಕೈ, ಪಟ್ಟಿವರಿ, ಏರಿತ್ತುವಕ್ಕೈ, ಪಳತಳತ್ತು ಮುಡಿಯಿಲ್ ಕೊಳ್ಳುವರಿ, ನಾಟ್ಟಾರ್ ಮಡೈಯಿಲ್ ಕೊಳ್ಳುಂವರಿ, ವಲ್ಲಾಳ ದೇವರ್ ವರಿ, ವಾಸಲ್‌ಪಣಂ, ತಲೈಪ್ಪಣಂ, ನಿಶ್ಚಯಿಪ್ಪ ಮುಗಾದಾರ್ವೈ, ಪಾಕ್ಕೈಯಿಲ್ ಮೋವಿ, ಮುಗಂಪಾರ್ವೆ ಚಮ್ಮದಂ, ಸಂಬಳಚಮ್ಮದಂ, ಸೆಟ್ಟಿಕಲ್, ವಾಣಿಕರ್, ಸೇನೈ ಅಂಗಡಿಯಾರ್, ಸಕ್ಕುಡಿ ಮಕ್ಕಳ್, ಸುಂಕವಾರಿ ಕೊಳ್ಳುಂವಗೈ, ಕೈಕೋಲರ್ ಪೇರ್, ಸುಂಗ ಆಣೈ ಪಿಳ್ಳೈಕಲ್ ಕಾಣಿಕ್ಕೈ

ಮೇಲಿನ ಶಾಸನವು ಪ್ರಮುಖವಾಗಲು ಕಾರಣ ಈ ಶಾಸನವು ತಿರುಪತಿಯನ್ನು ಸರ್ವಮಾನ್ಯಗ್ರಾಮವನ್ನಾಗಿ ಪರಿವರ್ತಿಸಿ, ನಾರಾಯಣ ಸಂಧಿಯೆಂದು ಕರೆಯಲಾಗುವ ಸ್ವಾಮಿಯ ಒಂದು ನಿವೇದನೆಯ ವಿಷಯವನ್ನು ತಿಳಿಸುವುದಾಗಿದೆ. ರಾಜನ ಆಜ್ಞೆಯನ್ನು ಜಾರಿಗೆ ತರಲು ಮಾಡಿದ ಏರ್ಪಾಡುಗಳ ವಿವರಗಳನ್ನು ಸ್ಥಾನತ್ತಾರರ ಗಮನಕ್ಕೆ ತರಲಾಗಿದೆ. ತಿರುಪತಿ ಗ್ರಾಮದಲ್ಲಿ ಸಂದಾಯವಾಗುತ್ತಿದ್ದ ಹಲವು ಹನ್ನೊಂದು ತೆರಿಗೆಗಳ ಬಗ್ಗೆ ತಿಳಿ

ದಾಖಲಾಗುವುದು ಆಸಕ್ತಿದಾಯಕವಾಗುತ್ತದೆ. ಇಲ್ಲಿ ಹೇಳಲಾಗಿರುವ ಹಲವಾರು ತೆರಿಗೆಗಳಲ್ಲಿ ಸ್ವರ್ಣ ಸುಂಕ, ಧಾನ್ಯತೆರಿಗೆ, ಉಚಿತ ಸೇವೆಯ ತೆರಿಗೆ, ಪ್ರಾಣಿಗಳ ಮೇಲಿನ ತೆರಿಗೆ, ಉತ್ಸವ ತೆರಿಗೆ, ವರ್ತಕ, ನೇಕಾರ, ಗಾಣಿಗರು ಮೊದಲಾದವರು ನೀಡುತ್ತಿದ್ದ ಉದ್ಯೋಗ ತೆರಿಗೆ, ಉದ್ಯಾನ ವನಗಳ ಪರವಾನಗಿ ಶುಲ್ಕ, ಮೀನುಗಾರಿಕೆಯ ಕೆರೆಗಳ ಸುಂಕ, ಜಾನುವಾರು ದೊಡ್ಡಿಯ ಸುಂಕ ಮೊದಲಾದವನ್ನು ಕುರಿತು ಹೇಳಲಾಗಿದೆ. ಈ ತೆರಿಗೆಗಳಲ್ಲಿನ ವೈವಿಧ್ಯತೆ ಹಾಗೂ ಸಂಕೀರ್ಣತೆಗಳಿಂದಾಗಿ ಅಂದಿನ ಆಡಳಿತ ವ್ಯವಸ್ಥೆಯ ಸಂಕೀರ್ಣವೂ ಸುವ್ಯವಸ್ಥಿತವೂ ಆಗಿದ್ದಿತೆಂದೂ, ಈ ಬಗ್ಗೆ ಸ್ಥಾನತ್ತಾರರಿಗೆ ವಿಷಯ ತಿಳಿಸಲಾಗುತ್ತು ಎಂಬುವುದರಿಂದಾಗಿ ಅವರುಗಳ ಕರ್ತವ್ಯ ಆಲಯದ ಕಾರ್ಯಗಳ ನಿರ್ವಹಣೆಯ ಹೊಣೆ ಮಾತ್ರವಾಗಿದ್ದು, ಅದಕ್ಕಾಗಿ ಧನವನ್ನು ಸ್ವೀಕರಿಸಿ ವೆಚ್ಚ ಮಾಡುತ್ತಿದ್ದರೆಂದೂ ತಿಳಿಯಬಹುದು. ಇದರೊಂದಿಗೆ ಧರ್ಮ ದರ್ಶಿತ್ವವೇನೂ ಸೇರಿರಲಿಲ್ಲ.

ಸ್ಥಾನತ್ತಾರರ ಚಿನ್ನತ್ವ : ಆದರೂ ಹಲವಾರು ಸಂದರ್ಭಗಳಲ್ಲಿ ಸ್ಥಾನತ್ತಾರರ ಅಭಿಪ್ರಾಯವನ್ನು ಕೇಳಿ ತಿಳಿಯಲಾಗುತ್ತಿದ್ದಿತು ಎಂದೂ, ಅವರ ಅಭಿಮತವನ್ನು ಗೌರವದಿಂದ ಆದರಿಸಲಾಗುತ್ತಿದ್ದಿತೆಂದೂ ಶಾಸನಗಳಿಂದ ತಿಳಿಯಬಹುದು ತಿ.ತಿ 195 ನೇ ಶಾಸನ ಹೀಗೆ ಇದೆ-

"ಸ್ವಸ್ತಿ - ಶ್ರೀಮನ್ ಮಹಾ ಪ್ರಧಾನಿಗಳು ತಿರುಮಲೆಯ ಸ್ಥಾನತ್ತಾರರ ಸಮಿತಿಯಲ್ಲಿ ಮಾಡುವ ವಿಜ್ಞಾಪನೆಯೇನೆಂದರೆ -

"ನಮಗ (ನಮ್ಮ) ಅಳಿಯ ತಿರುವೆಂಕಟನಾಥಯಾದವರಾಯರು (ಎಲ್ಲಾ ತೆರಿಗೆಗಳನ್ನೊಳಗೊಂಡ) ಸರ್ವಮಾನ್ಯವಾಗಿ ನೀಡಿರುವ ಇಳತ್ತೂರುನಾಡಿನ ಸಿಂಗಲ್ಲೂರು ಅಥವಾ ಪೂಂಗಲೂರನ್ನು ಸಿಂಗಯ ದಣ್ಣಾಯಕ ಇಮ್ಮಡಿ ರಾಹುತ್ತರಾಯರ ಅಪೇಕ್ಷೆಯಂತೆ ತಿರುವೆಂಕಟ ಮುಡ್ಡಯಾನನಿಗೆ ಆಡಿ ತಿರುನಾಳ್ ಉತ್ಸವಕ್ಕಾಗಿಯೂ, ಸಿತಕರಗಂಡನ್ ಸಂಧಿ ನಿವೇದನಾಗಾಗಿಯೂ ತಿರುವಿಡ್ಯಾಟ್ಟಂ ಕಾಣಿಕೆಯಾಗಿ ಸಮರ್ಪಿಸಿದ್ದು, ಈ ಗ್ರಾಮದ ಗಡಿಗಳಲ್ಲಿ ವಿಷ್ಣುಚಕ್ರದ ಗಡಿಗಲ್ಲುಗಳನ್ನು ನೆಟ್ಟು ಈ ಗ್ರಾಮದ ಇಡೀ ಆದಾಯವನ್ನು ಪಡೆದು ಉತ್ಸವವನ್ನು ನಡೆಸುವಂತಾಗಿ, ತಿರುಮಲೆಯಲ್ಲಿ ಸಿತಕರಗಂಡನ್ ಸಂಧಿಯ ಪ್ರಸಾದ ನಿವೇದನೆಯನ್ನು ಸಮರ್ಪಿಸುತ್ತ, ತಿರುಪತಿಯ ವೀರನರಸಿಂಗಪ್ಪೆರುಮಾಳ್ ಹಾಗೂ ತಿರುಮಂಗೈ ಆಳ್ವಾರರಿಗೆ ಪ್ರತಿನಿತ್ಯವೂ ಒಂದು ತಿರುಪ್ಪೊನಕ ನಿವೇದನ ಮಾಡುತ್ತ, ಸಿತಕರಗಂಡ ಮಠದಲ್ಲಿ ದಿನವೂ ಮೂವತ್ತೆರಡು ಮಂದಿ ಶ್ರೀ ವೈಷ್ಣವರಿಗೆ ಭೋಜನವನ್ನು ಕಲ್ಪಿಸಬೇಕೆಂದೂ, ಈ ಆದಾಯದಲ್ಲಿ ಮಿಕ್ಕ ಹಣದಿಂದ ನಮ್ಮ ಹೆಸರಿನಲ್ಲಿ ತಿರುಮಲೆಯಲ್ಲಿ ಒಂದು ಪುಷ್ಪವಾಟಿಕೆಯನ್ನು, ಕುಡಿಯುವ ನೀರಿನ ಕೇಂದ್ರವನ್ನೂ, ಮಿಕ್ಕ ಇತರ ಧರ್ಮಕಾರ್ಯಗಳನ್ನೂ ನಡೆಸಬೇಕೆಂದೂ ಬೇಡುತ್ತೇವೆ. ಜೊತೆಗೇ ಈ ಒಂದು ಏರ್ಪಾಡಿನ ವಿವರಗಳನ್ನು ಸೂರ್ಯಚಂದ್ರರು ಇರುವ ತನಕ ನಡೆಯಲು ಅನುಕೂಲವಾಗುವಂತೆ ಕಲ್ಲಿನಲ್ಲಿ ತಾಮ್ರದಲ್ಲಿ ಶಾಸನರೂಪದಲ್ಲಿ ಕೆತ್ತಿಸಬೇಕೆಂದು ಕೋರುತ್ತೇವೆ

"ಈ ಒಂದು ಧರ್ಮಕಾರ್ಯಕ್ಕೆ ಶ್ರೀ ವೈಷ್ಣವರ ರಕ್ಷೆಯಿರಲಿ -"

ಮೇಲಿನ ಶಾಸನದಿಂದ ರಾಜನು ಸ್ಥಾನತ್ತಾರರನ್ನು ಗೌರವಾದರಗಳಿಂದ ತನ್ನ ಅಪೇಕ್ಷೆಯ ಏರ್ಪಾಡುಗಳನ್ನು ಒಪ್ಪಲು ಬೇಡಿದ್ದು ತಿಳಿದುಬರುತ್ತದೆ ಜೊತೆಗೇ ಹಚ್ಚಿನ ಆದಾಯವನ್ನು ಇತರ ಧರ್ಮಕಾರ್ಯಗಳಲ್ಲಿ - ಮೂವತ್ತೆರಡು ಮಂದಿ ಶ್ರೀ ವೈಷ್ಣವ ಭೋಜನ - ಪುಷ್ಪವಾಟಿಕಾ ನಿರ್ವಹಣೆ, ಕುಡಿಯುವ ನೀರಿನ ಕೇಂದ್ರದ ನಿರ್ವಹಣೆ - ಮೊದಲಾದವುಗಳಲ್ಲಿ ತೊಡಗಿಸಬೇಕೆಂಬ ಸ್ಥಾನತ್ತಾರರ ಅಪೇಕ್ಷೆಯನ್ನು ಒಪ್ಪಿದಂತೆಯೂ ಕಂಡುಬರುತ್ತದೆ

ಸ್ಥಾನತ್ತಾರ್ ಶ್ರೀಪಾದತ್ತೇರಿ ಎಂಬ ಪದಸಮುಚ್ಚಯದಿಂದ ಸ್ಥಾನತ್ತಾರರ ಶ್ರೀಪಾದ ಸನ್ನಿಧಿಯಲ್ಲಿ ಬಿನ್ನಹವೆಂದರ್ಥವಾಗಿ, ಸಿಂಗಯ ನಂತಹ ಪ್ರಬಲ ಪಾಳೆಯಗಾರನೂ ಸ್ಥಾನತ್ತಾರರ ಬಗ್ಗೆ ಇಟ್ಟಿದ್ದ ಗೌರವ ಸೂಚಿತ ಆಗುತ್ತದೆ.

ಇಷ್ಟೊಂದು ಪದೋನ್ನತಿಯನ್ನು ಸ್ಥಾನತ್ತಾರರು ಪಡೆದಿದ್ದರೂ ಅವರು ಧರ್ಮದರ್ಶಿಗಳಾಗಿರಲಿಲ್ಲವೆಂಬುದು ತಿ.ತಿ. 237, 273 ಹಾಗೂ ತಿ.ತಿ. 485, 487 ಶಾಸನಗಳಿಂದ ತಿಳಿದುಬರುತ್ತದೆ. ತಮ್ಮ ದಾನಗಳಲ್ಲಿ ಮಂಗಿದೇವನಾಗಲೀ, ವೀರಕುಮಾರ ಕಂಪಣನಾಗಲೀ, ಬುಕ್ಕರಾಯನಾಗಲೀ ಸ್ಥಾನತ್ತಾರರ ಹೆಸರನ್ನೇ ಪರಿಗಣನೆಗೆ ತೆಗೆದುಕೊಳ್ಳಲಿಲ್ಲ ಎಂಬುದನ್ನು ಈ ಶಾಸನಗಳು ಹೇಳುತ್ತವೆ ಹೀಗೆಯೇ ತಿ.ತಿ 61 ನೇ ಶಾಸನದಲ್ಲಿ ಅಳಗಪ್ಪಿರಂದಕ್ಕಲಿಕನ್ನಿದಾಸರ್ ಹಲವು ಸಮಯಗಳಲ್ಲಿ ನಿವೇದನ ಮಾಡಲೆಂದು 450 ಪಣಂ ಹೊನ್ನನ್ನು ಶ್ರೀ ಭಂಡಾರಕ್ಕೆ ಒಪ್ಪಿಸಿದ್ದಾನೆಯೇ ಹೊರತು ಸ್ಥಾನತ್ತಾರರಿಗೆ ಅಲ್ಲ ಹೀಗೆಯೇ ತಿ.ತಿ. 103 ರ ಪ್ರಕಾರ ಹಲವಾರು ಸೇವೆಗಳಿಗಾಗಿ ಮುಲ್ಲೈ ತಿರುವೆಂಕಟ ಜೀಯರು ನೂರು ಪಣಂಗಳನ್ನು ಶ್ರೀ ಭಂಡಾರಕ್ಕೇ ನೀಡಿದ್ದಾರೆ

ಈ ಶಾಸನಗಳಲ್ಲಿ ಅಂದಿನ ಕಾಲದಲ್ಲಿ ಆಲಯ ಕೋಶಾಗಾರ ಆಗಿದ್ದ ಶ್ರೀ ಭಂಡಾರಕ್ಕೆ ನೇರವಾಗಿ ದಾನಗಳನ್ನು ಸೇರಿಸುತ್ತಿದ್ದ ರೀತಿಯನ್ನು ವಿವರಿಸಿದ್ದು ಅಂದಿನ ದಿನಗಳಲ್ಲಿ ಸ್ಥಾನತ್ತಾರರು ದಾನದ ಸೊತ್ತನ್ನು ಸ್ವೀಕರಿಸಲು ಅರ್ಹತೆಯಾಗಲೀ ಅಧಿಕಾರವಾಗಲೀ ಹೊಂದಿರಲಿಲ್ಲವೆಂಬುದನ್ನು ಸೂಚಿಸುತ್ತವೆ. ಹೀಗಾಗಿ ಈ ಕಾಲದವರೆಗೆ ಸ್ಥಾನತ್ತಾರರು ಸಾಮಾಜಿಕವಾಗಿ ಗೌರವಿಸಲ್ಪಟ್ಟರೂ ಆಲಯದ ಕಾರ್ಯಗಳ ನಿರ್ವಾಹಕರು ಮಾತ್ರವೇ ಆಗಿದ್ದರು.

ಧರ್ಮ ದರ್ಶಿಗಳಾಗಿ ಸ್ಥಾನತ್ತಾರರು : ಮೊದಲ ಬಾರಿಗೆ ಕ್ರಿ.ಶ 1387 ರಲ್ಲಿನ ಟಿ.ಟಿ. 153 ಶಾಸನದಲ್ಲಿ ಕೊಲ್ಲಿ ಕಾವಲದಾಸರಿಂದ ಸ್ಥಾನತ್ತಾರರು ಧರ್ಮದರ್ಶಿಗಳಂತೆ ಒಂದು ದತ್ತಿಯನ್ನು ಸ್ವೀಕರಿಸಿ ಅದನ್ನು ಒಂದು ಶಾಸನದಲ್ಲಿ ಗುರುತಿಸಿದ್ದಾರೆ. ಅದರ ದಾಖಲೆ ಹೀಗೆ-

"ಶಕ 1308 ರ ಕ್ಷಯ ಸಂವತ್ಸರದಲ್ಲಿನ ಮೀನ ಮಾಸದ ಶುಕ್ಲಪಕ್ಷದ ಪಂಚಮಿಯ ಕೃತ್ತಿಕಾ ನಕ್ಷತ್ರದ ದಿನ ತಿರುಮಲೆಯ ಸ್ಥಾನತ್ತಾರರಿಂದ ತಿರುಪತಿಯ ಶ್ರೀ ವೈಷ್ಣವರಲ್ಲಿ ಒಬ್ಬರಾದ ಪೆರುಮಾಳ್ ಕೊಲ್ಲಿಕಾವಲ್ ದಾಸರ ಪರವಾಗಿ ಈ ಶಾಸನವನ್ನು ಕೆತ್ತಿಸಲಾಗಿದೆ.

"ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿಯವರಿಗೆ ಇಂದಿನಿಂದ ಪ್ರತಿ ನಿತ್ಯವೂ ಇವರ ಹೆಸರಿನಲ್ಲಿ ಒಂದು ತಿರುಪ್ಪೊನಕ ಸಮರ್ಪಣೆಯಾಗಬೇಕು. ಇದಕ್ಕಾಗಿ ಶ್ರೀಯುತರು ಶ್ರೀ ಭಂಡಾರಕ್ಕೆ ನೀಡಿರುವ 1000 ಪಣಂನ ಮೇಲಿನ ಬಡ್ಡಿಯನ್ನು ಬಳಸಬೇಕು. ಈ ಪಂಗುಣಿ ತಿಂಗಳ ಮೊದಲದಿನದಿಂದ ಆರಂಭವಾಗುವ ತಿರುಪ್ಪೊನಕ ನಿವೇದನೆ ಸೂರ್ಯ ಚಂದ್ರರಿರುವ ವರೆಗೆ ನಡೆಯುತಕ್ಕದ್ದು.

"ಚಾಲುಕ್ಯ ನಾರಾಯಣ ಕಲ್‌ನಿಂದ ಅಳೆದ 1 ಮರಕ್ಕಲ್ ಅಕ್ಕಿ 1 ಅರಕ್ಕಲ್ ತುಪ್ಪ ಹಾಗೂ ತರಕಾರಿಗಳು, ಉಪ್ಪು ಹಾಗೂ ಮೆಣಸುಗಳು ಸೇರಿ ಆದ ಪ್ರಸಾದದಲ್ಲಿ ಕಾಣಿಭಾಗ - ಒಂದು ನಾಲ್ಕನೆ



ಪ್ರಸಾದವನ್ನು ದಾನಿಯು ಸ್ವೀಕರಿಸತಕ್ಕದ್ದು. ಈ ಏರ್ಪಾಡು ದಾನಿಯ ವಾರಸುದಾರರಿಗೂ ಮುಂದುವರಿದು ಸೂರ್ಯ ಚಂದ್ರರಿರುವರೆಗೆ ಮುಂದುವರೆತಕ್ಕದ್ದು.

"ಈ ಶಾಸನ ಶ್ರೀವೈಷ್ಣವರ ಅಪ್ಪಣೆಯಿಂದ ತಿರುಮಲೆಯ ಆಲಯದ ಲೆಕ್ಕಾಧಿಕಾರಿಯಾದ ತಿರುನಿನ್ರ ಊರ್ ಉಡ್ಯೆಯನಿಂದ ಹಾಕಿಸಲಾಗಿದೆ. ಇದನ್ನು ಶ್ರೀವೈಷ್ಣವರು ರಕ್ಷಿಸಲಿ."

ತಿ.ತಿ. 57 ಹಾಗೂ 52 ಜಿ.ಟಿ. ಶಾಸನಗಳಲ್ಲಿ ಸ್ಥಾನತ್ತಾರರು ಧರ್ಮದರ್ಶಿಗಳಂತೆ ಮುಲ್ಲೈ ತಿರುವೆಂಕಟದಾಸರಿಂದ ಮಾರ್ಗಳಿ ತಿಂಗಳಿನಲ್ಲಿ ಹತ್ತು ದಿನಗಳ ಕಾಲ ತಿರುಪ್ಪಾವೈ ಹಾಡುವಾಗ ನಿವೇದನೆ ಮಾಡಲೆಂದು ದತ್ತಿಯಾದ 1200 ಪಣಂಗಳನ್ನು ಪಡೆದಿರುವುದನ್ನು ಕಾಣಬಹುದಾಗಿದೆ.

"ಸ್ವಸ್ತಿಶ್ರೀ ಶಕ 1312 ಪ್ರಮೋದೂತ ನಾಮ ಸಂವತ್ಸರದ ಮಾರ್ಗಳಿ ಮಾಸದ ಹನ್ನೊಂದನೆಯ ದಿನ ತಿರುಮಲೆಯ ತಿರುನಂದನ ವನದ ನಿರ್ವಾಹಕ ಶ್ರೀಮುಲ್ಲೈ ತಿರುವೆಂಕಟಜೀಯರ ಪರವಾಗಿ ತಿರುಮಲೆಯ ಸ್ಥಾನತ್ತಾರರು ಹಾಕಿಸಿದ ಶಿಲಾಶಾಸನ

"ತಿರುಮಲೆಯ ಮಲೈಕುನಿಯ ನಿನ್ರ ಪೆರುಮಾಳ್ ಹಾಗೂ ನಾಚ್ಚಿಯಾರರ ಸನ್ನಿಧಿಯಲ್ಲಿ ತಿರುಪ್ಪಾವೈ ಪಾಶುರಗಳನ್ನು ಮಾರ್ಗಳಿ ತಿಂಗಳ ಮಧ್ಯದ ಹತ್ತು ದಿನಗಳಲ್ಲಿ ಹಾಡುವಾಗ ಒಂದು ತಿರುವೊಳಕ್ಕಂ ಸಮರ್ಪಣೆಗೆ ಬೇಕಾದ ಸಾಮಗ್ರಿಗಳನ್ನು ನೀಡುವುದು ನಡೆಯಲಿ

"ತಾವು ಇಂದು ನೀಡಿರುವ ಅಸಲು 1200 ಪಣಂಗಳ ಮೇಲಿನ ಬಡ್ಡಿಯು ಈ ಸಾಮಗ್ರಿಗಳಿಗಾಗಿ ವೆಚ್ಚವಾಗಲಿ.

"ಮೇಲಿನ 1200 ಪಣಂಗಳ ಮೇಲಿನ ಬಡ್ಡಿಯ ಹಣವಾಗಿ ಶ್ರೀ ಭಂಡಾರದಿಂದ ಪ್ರತಿವರ್ಷವೂ ಈ ಸಾಮಗ್ರಿಗಳ ವೆಚ್ಚವಾಗಿ ಬರಲಿ ಹಾಗೂ ಈ ದತ್ತಿ ಸೂರ್ಯಚಂದ್ರರಿರುವವರೆಗೆ ನಡೆಯಲಿ.

"ಆಲಯ ಲೆಕ್ಕಾಧಿಕಾರಿ ತಿರುನಿನ್ರ ಊರ್ ಉಡ್ಯೆಯನು ಶ್ರೀ ವೈಷ್ಣವರ ಅಪ್ಪಣೆಯಿಂದ ಮಾಡಿದ ಒಕ್ಕಣಿಕೆಯಿದು. ಇದಕ್ಕೆ ಶ್ರೀವೈಷ್ಣವರ ರಕ್ಷೆಯಿರಲಿ."

ಇದರ ನಂತರದ ಎಲ್ಲ ಶಾಸನಗಳಲ್ಲಿಯೂ ಸ್ಥಾನತ್ತಾರರು ಧರ್ಮದರ್ಶಿಗಳೆಂದೇ ಕಂಡುಬರುತ್ತಾರೆ ಎಂಬುದನ್ನು ಆಲಯದ ಲೆಕ್ಕಾಧಿಕಾರಿಗಳ ಒಕ್ಕಣಿಕೆಗಳಿಂದ ತಿಳಿಯಬಹುದಾಗಿದೆ.

ಆಲಯ ಕರಣಿಕರು : (ಲೆಕ್ಕಿಗರು) ಆಲಯದಲ್ಲಿ ಈ ರೀತಿಯ ಲೆಕ್ಕಿಗರು ಕರಣಿಕರು - ತಿರುನಿನ್ರ ಊರ್ ಉಡ್ಯೆಯನ್ ಪದವಿ ಶಕ 1301 ರಲ್ಲಿ ಪ್ರವೇಶ ಪಡೆಯಿತು ತಿ.ತಿ 67 ರಲ್ಲಿ ಈ ರೀತಿ ಹೇಳಲಾಗಿದೆ-

"ಈ ಮೇಲಿನ ವೆಚ್ಚಗಳಿಗೆ ತಕ್ಕ ಬಡ್ಡಿಯ ಸಂಪಾದನೆಯಾಗುವ 400 ಪಣಂಗಳ ಅಸಲನ್ನು ಶ್ರೀ ಭಂಡಾರಕ್ಕೆ ತಿರುಪತಿಯ ಶ್ರೀ ವೈಷ್ಣವರಲ್ಲಿ ಒಬ್ಬರಾದ ತಿರುಕ್ಕಲಿ ಕನ್ರ ದಾಸರ್ ಅವರು ನೀಡಿದ್ದು ಅಪ್ಪಪ್ಪಡಿ ತಿರುಕ್ಕಣ್ಣಮಡ್ಯೆಗಳಿಗೆ ತಗಲುವ ವೆಚ್ಚ 50 ಪಣವಾಗಿ ಒಟ್ಟು 450 ಪಣವಾಗುತ್ತದೆ.

"ಈ 450 ಪಣಂಗಳನ್ನು ಸ್ವೀಕರಿಸಿದ ನಂತರ ಮೇಲೆ ಹೇಳಿದಂತೆ ಸಾಮಗ್ರಿಗಳನ್ನು ಶ್ರೀ ಭಂಡಾರದಿಂದ ತೆಗೆದುಕೊಡುವ ಪದ್ಧತಿ ಸೂರ್ಯಚಂದ್ರರಿರುವ ತನಕ ನಡೆಯಲಿ.

"ಹೀಗೆ ಶ್ರೀ ವೈಷ್ಣವರ ಅಪ್ಪಣೆಯ ಮೇರೆಗೆ ತಿರುನಿನ್ರ ಊರ್ ಉಡ್ಯೆಯನ್ ಈ ಒಕ್ಕಣಿಕೆಯನ್ನು ಬರೆದಿದ್ದಾನೆ ಶ್ರೀವೈಷ್ಣವರ ರಕ್ಷೆ ಇರಲಿ."

ಶಾಸನದ ನಂತರ ಎಲ್ಲ ಶಾಸನಗಳಲ್ಲಿಯೂ ಈ ಲೆಕ್ಕಿಗರು ಕಂಡುಬರುತ್ತಾರೆ.

### ಸ್ಥಾನತ್ತಾರ

### ಸ್ಥಾನಪಲ್ಲಟದ ಕಾರಣಗಳು

ಸ್ಥಾನತ್ತಾರರು ಆಲಯ ಕೆಲಸಗಳ ನಿರ್ವಾಹಕರ ಸ್ಥಾನದಿಂದ ಧರ್ಮದರ್ಶಿಗಳ ಸ್ಥಾಯಿಗೆ ಹೇಗೆ ಸ್ಥಾನ ಪಲ್ಲಟ ಹೊಂದಿದರೆಂಬುದನ್ನು ಶಾಸನಗಳೇನೂ ವಿವರಿಸುವುದಿಲ್ಲ.

ಶಾಸನಗಳಲ್ಲಿ ಉಕ್ತವಾದ ಕಾಲವನ್ನು ಪರಿಗಣಿಸಿದಾಗ, ಯಾದವರಾಯರ ಪತನಾನಂತರ ಶ್ರೀರಂಗನಾಥನ ವಿಗ್ರಹ ತಿರುಮಲೆಯ ಆಲಯದಲ್ಲಿ ಕೆಲಕಾಲವಿರುವ ಹೊತ್ತಿನಲ್ಲಿ ಶಾಸನಗಳು ಮೊದಲಬಾರಿಗೆ ಆಲಯ ಲೆಕ್ಕಿಗರನ್ನು ಹೆಸರಿಸುತ್ತ ಸ್ಥಾನತ್ತಾರರು ಧರ್ಮದರ್ಶಿಗಳಾಗಿದ್ದಿರಬಹುದಾದ ಬಗ್ಗೆ ಸುಳಿವು ನೀಡುತ್ತವೆ. ಯಾದವರಾಯರ ಪತನ ಕಾಲದಲ್ಲಿ ಉಂಟಾದ ಅಯೋಮಯ ಸ್ಥಿತಿಯಲ್ಲಿ, ರಾಜರ ಹಿಡಿತ ಕೈತಪ್ಪುತ್ತಿರುವ ಹೊತ್ತಿನಲ್ಲಿ ಆಲಿ

ುದಲೆಕ್ಕಪತ್ರಗಳನ್ನು ನೋಡಿಕೊಳ್ಳಲು ಒಬ್ಬ ಲೆಕ್ಕಿ ನನ್ನು ನಿಯಮಿಸಿ, ಸ್ಥಾನತ್ತಾರರನ್ನೇ ಧರ್ಮದರ್ಶಿಗ ಂದು ತಿಳಿಯುವಂತಹ ಅಗತ್ಯವುಂಟಾಗಿರಬೇಕು. ಂತರ ನಿಧಾನವಾಗಿ ಈ ಹುದ್ದೆ ಬೇರು ಬಿಟ್ಟಿರ ೇಕು

ಕ್ರಿಶ 1380 ರ ಜನವರಿಯ ಪೂರ್ವದಲ್ಲಿ ಸ್ಥಾನ ತ್ತಾರರು ಪ್ರಾಯಶಃ ಒಬ್ಬ ತಿರುನಿನ್ರ ಊರ್ ಉಡೈ ಯನನ್ನು ಆಮದು ಮಾಡಿಕೊಂಡಿರಬೇಕು. ಕ್ರಿ.ಶ. 384 ರಲ್ಲಿ (53 ಜಿ.ಟಿ.) ಸ್ಥಾನತ್ತಾರರು ಯಾದವ ಾಯರ ಕೈಕೆಳಗೆ ಆಲಯದ ಕೆಲಸಗಳ ನಿರ್ವಾಹ ರಾಗಿರುವ ಬದಲಿಗೆ ಪೂರ್ಣರೂಪದ ಧರ್ಮದ ್ಶಿಗಳಾಗಿ ಸ್ಥಾಪಿತರಾದರು. ಅವರು ತೆಗೆದುಕೊ ್ಳಬೇಕಾಗಿದ್ದ ಹಾಗೂ ಸೂಕ್ತವಾದ ನಿರ್ಣಯ ಾದಾಗಿದ್ದಿತು. ಅಂದಿನ ರಾಜಕೀಯದ ಉಲ್ಲೋ ಲಕಲ್ಲೋಲದ ದಿನಗಳಲ್ಲಿ ರಾಜ್ಯದ ರಾಜನು ಆಲ ಯದ ವ್ಯವಹಾರಗಳಲ್ಲಿ ಯಾವುದೇ ರೀತಿಯ ಆಸ ಕ್ತಿಯನ್ನೂ ತೋರಿಸುವಂತೆಯೇ ಇರಲಿಲ್ಲ. ಯಾದ ವರಾಯರ ಪ್ರಾಧಾನ್ಯ ಘಟ್ಟಿಯಾದವರಾಯನಿಂದ ಕ್ರಿಶ. 1100 ರಲ್ಲಿ ಆರಂಭವಾಗಿ ಕ್ರಿಶ. 1360 ವರೆಗೆ ಎರಡೂವರೆ ಶತಮಾನದ ಕಾಲ ನಡೆದಿತು. ಹೊಸ ರಾಜನಿಗೆ ಆಲಯದ ಬಗ್ಗೆ ಆದರ ಗೌರ ವಗಳು ಇನ್ನೂ ಮೂಡಿ ಬರಬೇಕಾಗಿದ್ದಿತು. ಅಂದಿನ ಸ್ಥಾನತ್ತಾರರು ಶುದ್ಧ ಗೌರವಾನ್ವಿತ ವ್ಯಕ್ತಿತ್ವ ಪಡೆ ದಿದ್ದರೆನ್ನಬೇಕು. ಸಿಂಗಯ ದಂಡನಾಯಕನಂತಹ ಹಿರಿಯ ಅವರ ಪಾದಸನ್ನಿಧಿಯಲ್ಲಿ ಪ್ರಾರ್ಥಿಸಿದ್ದನ್ನು ನಾವು ನೋಡಿದ್ದೇವೆ. ತಿರುವೆಂಕಟನಾಥನೇ ತನ್ನ ಶಾಸನವನ್ನು ಅವರಲ್ಲಿ ತನ್ನ ಬಿನ್ನಹವೆಂದು ಕರೆದು ಕೊಂಡ. ಸ್ಥಾನತ್ತಾರರು ಪೂರ್ಣಪ್ರಮಾಣದ ಧರ್ಮ ದರ್ಶಿಗಳಾದದ್ದರ ಬಗ್ಗೆ ಬೆಳಕು ಚೆಲ್ಲುವಲ್ಲಿ ತಿರುಮ ಲೆಯ ಆಲಯದ ಪಡಿಕಾವಲಿ ಗೋಪುರದ ಒಳಭಾ ಗದಲ್ಲಿನ ಎಡಗಡೆಗೆ ಉತ್ತರದಲ್ಲಿ ಕಂಡು ಬರುವ ಒಂದು ಸಂಸ್ಕೃತ ಗ್ರಂಥ ಲಿಪಿಯ ತ್ರುಟಿತ ಶಾಸನ ಪ್ರಮುಖವೆನ್ನಬೇಕು. ಇದರ ಒಕ್ಕಣೆಕೆ ಹೀಗೆ - (48 ತಿ.ತಿ.) ..........ಶ್ರೇಷ್ಠ ಕ್ಷಿತಿಪಾಲನು ಪರಮಪದವ ನ್ನೈದಲು ......................ಸೂಕ್ತ ಕ್ರಮವನ್ನು ಅನುಸರಿ ಸಲಾಗಿದೆ.

ಈ ಶಾಸನವು ಪ್ರಾಯಶಃ ಕಡೆಯ ಯಾದವರಾ ಯನ ಮರಣವನ್ನೂ ನಂತರ ಅನುಸರಿಸಲಾದ ಪದ್ಧ ತಿಯ ವಿವರವನ್ನೂ ನೀಡುತ್ತದೆ ಎನ್ನಬೇಕು.

ಸ್ಥಾನತ್ತಾರರು ಧರ್ಮದರ್ಶಿಗಳೆಂದು ತೀರ್ಮಾ ನವಾದರೂ ರಾಜನ ಧರ್ಮಸಾಸನಗಳು ಈ ಸ್ಥಾನ ತ್ತಾರರ ಉಲ್ಲೇಖವೇ ಇಲ್ಲದಂತೆಯೂ ಪ್ರಕಟವಾಗ ತೊಡಗಿದವು. ಹೀಗಾಗಿ ವೀರಪ್ರತಾಪ ದೇವರಾಯ ಮಹಾರಾಯನ ಕನ್ನಡ ಭಾಷೆಯ ಧರ್ಮಶಾಸನವು ಬಂಗಾರದ ಬಾಗಿಲ ಮೇಲಿದೆ. ಇದು ಶಕ 1351 ರ ಸೌಮ್ಯನಾಮ ಸಂವತ್ಸರ ಮಾರ್ಗಶಿರ ಮಾಸದ ಶುಕ್ಲ ದಶಮಿಯಂದು ಸೋಮವಾರ (15-12-1429) (ತಿ.ತಿ 188) ಚಕ್ರವರ್ತಿಯು ಆಲಯ ಸಂದ ರ್ಶನ ಮಾಡಿದಾಗ ಹಾಕಿಸಿದ್ದು, ರಾಜಭಂಡಾರ ದಿಂದ 2200 ಸುವರ್ಣದ ಹೊನ್ನುಗಳನ್ನು ಆಲ ಯಕ್ಕೆ ವರ್ಗಾಯಿಸಿ, ಮೂರು ಗ್ರಾಮಗಳನ್ನು ಸರ್ವ ಮಾನ್ಯ ಗ್ರಾಮಗಳೆಂದು ಗುರುತಿಸಿ ದಾನ ಮಾಡಿ ಪ್ರತಿವರ್ಷವೂ ಒಂಭತ್ತು ದಿನಗಳ ಉತ್ಸವವನ್ನು ನಡೆಸಿ ಮತ್ತಿತರ ಸೇವೆಗಳನ್ನು ಮಾಡಬೇಕೆಂದು ತಿಳಿ ಸುತ್ತದೆ. ಈ ಆಸ್ತಿಗಳನ್ನು ಒಪ್ಪಿಕೊಳ್ಳಲು ಧರ್ಮ ದರ್ಶಿಗಳ ಹೆಸರನ್ನು ಹೇಳಿಲ್ಲ. ಇದರಂತೆಯೇ 1-7-1430 ರಲ್ಲಿ (99 ತಿ.ತಿ.) ವಿಪ್ಪನ್ನ ದೇವರಾ ಯನ ಪುತ್ರ ಸಿರಿಗಿರೀಶ್ವರನು ಶ್ರೀ ವೆಂಕಟ ಪರ್ವತದ ದೇವರಿಗೆ ವಜ್ರಖಚಿತವಾದ ಚಿನ್ನದ ಪಟ್ಟವನ್ನು ಸಮರ್ಪಿಸಿದಾಗಲೂ ಸ್ಥಾನತ್ತಾರರ ಹೆಸರು ಇಲ್ಲ. ಈ ಶಾಸನವು ಸಂಸ್ಕೃತದಲ್ಲಿದೆ (ಗ್ರಂಥ ಲಿಪಿ).

ತಿ.ತಿ. 100 ನೇ ಶಾಸನದಲ್ಲಿ ಮುದ್ದಯ್ಯ ನಾಯ ಕನ ಮಗ ತೆಪ್ಪದ ನಾಗಯ್ಯ ನಾಯಕರು 3000 ಹೊನ್ನು ನೀಡಿ ತನ್ನ ಹೆಸರಿನಲ್ಲಿ ಚಿನ್ನದ ಕವಚವನ್ನು ಮಾಡಿಸಬೇಕೆಂದೂ, 100 ಹೊನ್ನು ನೀಡಿ ದಿನವೂ ಎರಡು ಹೂವಿನ ಹಾರಗಳನ್ನು, ಎರಡು ಹರಿವಾಣ, ಎಂಟು ಉಪ್ಪೋರಗಳನ್ನು ಅರ್ಪಿಸಬೇಕೆಂದು ಕನ್ನ ಡದ ಧರ್ಮಶಾಸನ ಹಾಕಿಸಿದ. ಇಲ್ಲಿಯೂ ಸ್ಥಾನ ತ್ತಾರರು ಪ್ರಾಮಾಣಿಕವಾಗಿ ಈ ದಾನಗಳನ್ನು ಆಚ ರಣೆಗೆ ತರಬೇಕೆಂದಿದೆ. (12-1-1443)

**ಸ್ಥಾನತ್ತಾರ ಸಮಿತಿ :** ಈ ಸಮಿತಿಯ ಅಥವಾ ಸಂಘದ ಸ್ವರೂಪದ ಬಗ್ಗೆ ಸ್ಪಷ್ಟವಾದ ಉಲ್ಲೇಖ ಗಳಾವುವೂ ಇಲ್ಲ. ಕ್ರಿಶ. 1360 ರ ನಂತರ ಈ ಸಮಿತಿಯು ಖಚಿತ ರೂಪವನ್ನು ಪಡೆಯಲು ಒಂದು ಮೂವತ್ತು ವರ್ಷವಾಗಿರಬೇಕೆಂಬುದರಲ್ಲಿ ಅನುಮಾನವಿಲ್ಲ. ಯಾದವರಾಯರ ಆಲಯ ಪ್ರಭುತ್ವ ಕೊನೆಗೊಂಡ ಮೇಲೆ, ಶ್ರೀರಂಗನಾಥಸ್ವಾ ಮಿಯನ್ನು ಶ್ರೀರಂಗಕ್ಕೆ ಒಯ್ದು ಮೇಲೆ, ಆಲಯದ ಆಸ್ತಿಗಳ ಪುನಃ ಪರಿಶೀಲನೆ ಹಾಗೂ ಖರ್ಚು ವೆಚ್ಚ ಗಳ ಮೇಲು ವಿಚಾರಣೆಯ ತೀವ್ರ ಅಗತ್ಯ ಉಂಟಾಗಿ ರಬೇಕು. ಆಲಯದಲ್ಲಿ ಸಮರ್ಥರಾದ ಲೆಕ್ಕಿಗರನ್ನು ನಿಯಮಿಸಿ ಕ್ರಿಶ. 1379 - 80 ರ ಹೊತ್ತಿಗೆ ತಿರುನಿನ್ರ ಊರ್ ಉಡೈಯ ಪದವಿಯನ್ನು ಪ್ರವೇಶಗೊಳಿಸ ಲಾಯಿತು. ಹತ್ತು ವರ್ಷಗಳ ನಂತರ 1390 ರಲ್ಲಿ ಸ್ವಯಂ ಪೂರ್ಣವಾದ ಸ್ಥಾನತ್ತಾರ ಸಂಸ್ಥೆ - ಸಮಿತಿ - ಸ್ಥಾಪಿತವಾಯಿತು - ಎಂದು ನೋಡಿದ್ದಾಗಿದೆ (ತಿ.ತಿ 67) ಇದರಲ್ಲಿಯೇ ದಾನಿಗಳಿಗೆ ಕಾಲು ಭಾಗ ಪ್ರಸಾದ ವಿತರಣೆಯ ಯೋಜನೆಯೂ ಬೆಳ ಕಿಗೆ ಬಂದಿದ್ದು, ಸ್ಥಾನತ್ತಾರರಿಗೆ ಕೆಳಕಂಡ ಪ್ರಮಾಣ ದಲ್ಲಿ ಭಾಗವನ್ನು ನೀಡುತ್ತ ಒಟ್ಟು 12 ಭಾಗಗಳನ್ನು ನಿರ್ವಹಿಸಲಾಗಿದ್ದಿತು.

| | |
|---|---|
| ತಿರುಪತಿ ಶ್ರೀವೈಷ್ಣವರು | 4 |
| ತಿರುಚಾನೂರು ಸಭೈಯರ್ | 3 |
| ನಂಬಿಮಾರ್ | 1 |
| ಕೋಯಿಲ್ ಕೆಲ್ವಿ ಜೆಯರ್ | 2 |
| ಕೋಯಿಲ್ ಕಣಕ್ಕು ತಿರುನಿನ್ರುಡೆಯರ್ | 2 |
| | ......... |
| | 12 |

ಈ ವಿತರಣೆಯ ಪದ್ಧತಿಯೇ ತಿರುಪತಿಯ ಆಲ ಯದಲ್ಲಿಯೂ ಜಾರಿಯಲ್ಲಿದ್ದಿತು.

ಹೀಗಾಗಿ ಸ್ಥಾನತ್ತಾರರು ಹನ್ನೆರಡು ಮಂದಿಯಿದ್ದಿ ರಬೇಕೆಂದು ನಾವು ಊಹಿಸಬಹುದು.

(ಮುಂದಿನ ಸಂಚಿಕೆಯಲ್ಲಿ-)

ಆಲಯ ಹಾಗೂ ರಾಮಾನುಜರು.)



# ದೇವರಿಗೆ ಅರ್ಪಿಸಬೇಕಾದ ಪುಷ್ಪಗಳು

- ಉಡುಪಿ ಶ್ರೀನಿವಾಸಭಟ್.

ದೇವರಿಗೆ ಪುಷ್ಪಗಳನ್ನು ಅರ್ಪಿಸಿದರೆ ಅನುಗ್ರಹ ಮಾಡುತ್ತಾನೆ. ಆದರೆ ಅದು ಯಾವ ತರಹದ ಪುಷ್ಪಗಳು ಎಂಬುದನ್ನು ಈ ಕೆಳಗೆ ವಿವರಿಸಲಾಗಿದೆ.

ಅಹಿಂಸಾ ಪ್ರಥಮಂ ಪುಷ್ಪಂ
ಪುಷ್ಪಂ ಇಂದ್ರಿಯ ನಿಗ್ರಹಃ
ಸರ್ವಭೂತದಯಾ ಪುಷ್ಪಂ
ಸತ್ಯಪುಷ್ಪಂ ವಿಶೇಷತಃ
ಜ್ಞಾನ ಪುಷ್ಪಂ ಧ್ಯಾನಪುಷ್ಪಂ
ತಪಃ ಪುಷ್ಪಂ ಕ್ರಿಯಾಪುಷ್ಪಂ
ಅರ್ಚತಿ ತುಷ್ಯತಿ ಕೇಶವ

ಈ ಎಂಟು ಪುಷ್ಪಗಳ ಭಾವಾರ್ಥ ಏನವೆಂದರೆ -

1. ಅಹಿಂಸಾ ಪ್ರಥಮಂ ಪುಷ್ಪಂ : ಮೊಟ್ಟ ಮೊದಲನೇ ಪುಷ್ಪ ಅಹಿಂಸೆ. ಅಂದರೆ ಹಿಂಸೆ ಮಾಡದಿರುವುದು. ಯಾರ ಮನಸ್ಸನ್ನೂ ನೋಯಿಸದೆ ಇರುವುದು. ಹಿಂಸಾತ್ಮಕವಾದ ರೀತಿಯಲ್ಲಿ ಚುಚ್ಚು ಮಾತುಗಳನ್ನು ಆಡದೇ ಇರುವುದು. ಮಾತು ಆಡಿದರೆ ಹೋಯಿತು ಮುತ್ತು ಒಡೆದರೆ ಹೋಯಿತು. ಇದನ್ನೇ ಎಲ್ಲಾ ಮಹನೀಯರೂ ಹೇಳಿದ್ದಾರೆ. ಗಾಂಧೀಜಿಯವರೂ ಹೇಳಿದ್ದಾರೆ - 'ಮಾತೇ ಮಾಣಿಕ್ಯ','ಮಾತು ಬೆಳ್ಳಿ ಮೌನ ಬಂಗಾರ' ಎನ್ನುವ ಗಾದೆ ಮಾತೂ ಇವೆ ವಿಶೇಷವಾಗಿ ಮಾತನಾಡುವಾಗ ಜಾಗ್ರತೆ ವಹಿಸಬೇಕೆನ್ನುವುದೇ ಆಗಿದೆ.

2. ಪುಷ್ಪಂ ಇಂದ್ರಿಯ ನಿಗ್ರಹಃ: ಇದು ನಮ್ಮ ಜೀವನದಲ್ಲಿ ತುಂಬಾ ಅವಶ್ಯಕವಾದದ್ದು. ಪರ ಸ್ತ್ರೀಯರನ್ನು ನೋಡುವ ದೃಷ್ಟಿಯಲ್ಲಿ ಯಾವುದೇ ರೀತಿಯ ಕಲ್ಮಶ ಭಾವನೆಯಿರದೆ ನಮ್ಮ ಮನೆಯವರಂತೆ ಅನ್ನುವ ಆತ್ಮೀಯತೆ ತುಂಬಿರಬೇಕು ಅಕ್ಕ-ತಂಗಿ, ಹಿರಿಯರನ್ನು ಮಾತಾ-ಪಿತೃಗಳಂತೆ ಗೌರವವಾಗಿ ನೋಡುವುದೇ ಅಲ್ಲದೇ ತಾಯಿಯಲ್ಲಿ, ಅಕ್ಕ-ತಂಗಿಯರುಗಳಲ್ಲಿ ಇರುವ ಪ್ರೇಮವೇ ಬೇರೆ ನಮಗೆ ನಿಯಮಿತವಾದ ಸ್ತ್ರೀಯ ಪ್ರೇಮವೇ ಬೇರೆ. ಹಾಗೆ ಬೇರೆಯವರಲ್ಲಿ ಪ್ರೀತಿ ವಾತ್ಸಲ್ಯ ಗೌರವದಿಂದ ನಡೆಯುವುದೇ ಇಂದ್ರಿಯ ನಿಗ್ರಹ ಪುಷ್ಪದ ತತ್ವ.

3. ಸರ್ವಭೂತದಯಾ ಪುಷ್ಪಂ : ಎಲ್ಲರಲ್ಲೂ ದಯೆ, ಕರುಣೆ, ತೋರಿಸುವುದು. ವಿಶ್ವತವಾದ ಮಾತುಗಳನ್ನಾಡುವುದು ಇದಕ್ಕೆ ಜಾತಿ - ಮತ ಭೇದವಿಲ್ಲ. ಸರ್ವಜನರ ಭಾಗಿಯಾಗುವುದು. ಇದನ್ನು ಗಾಂಧೀಜಿಯವರೂ, ಎಲ್ಲ ಮಹನೀಯರೂ ಹೇಳಿದ್ದಾರೆ. ಇದೇ ಇದರ ಒಳಗಿನ ತತ್ವ.

4. ಸತ್ಯ ಪುಷ್ಪಂ ವಿಶೇಷತಃ : ಇದು ವಿಶೇಷವಾದ ಪುಷ್ಪ, ಎಲ್ಲಾ ಕಡೆಯಲ್ಲೂ ಸತ್ಯವನ್ನೇ ಮಾತನಾಡುವುದು ಇದು ವ್ಯಾಪಾರ ವ್ಯವಹಾರದಲ್ಲಿ, ಮನೆಯಲ್ಲಿ ವಿಶೇಷವಾಗಿ ನಡೆಸಬೇಕೆನ್ನುವುದೇ ಈ ಪುಷ್ಪದ ಒಳಗಿನ ತತ್ವ.

5. ಜ್ಞಾನ ಪುಷ್ಪಂ : ಇದು ವ್ಯವಹಾರ ಜ್ಞಾನಕ್ಕಿಂತಲೂ ವಿಶೇಷವಾಗಿ ಆಧ್ಯಾತ್ಮಿಕ ಜ್ಞಾನ. ಭಗವಂತನ ವಿಚಾರದ ಜ್ಞಾನ, ಮಹನೀಯರ ವಿಚಾರದಲ್ಲಿ ಜ್ಞಾನ. ತಿಳಿದುಕೊಳ್ಳುವುದೇ ಇದರ ತತ್ವ.

6. ಧ್ಯಾನ ಪುಷ್ಪಂ : ಇದು ಎಲ್ಲರಿಗೂ ಅಗತ್ಯವಾಗಿ ಬೇಕಾಗಿರುವ ಪುಷ್ಪ, ಕೃತಯುಗ, ತ್ರೇತಾಯುಗ, ದ್ವಾಪರಯುಗಕ್ಕಿಂತಲೂ ವಿಶೇಷವಾಗಿ ಕಲಿಯುಗದಲ್ಲಿ ಧ್ಯಾನವೇ ಮುಖ್ಯ ಸಾಧನವಾಗಿದೆ. ಕೇವಲ ಬೆಳಗ್ಗೆ, ಮಧ್ಯಾಹ್ನ, ಸಂಧ್ಯಾಕಾಲ ದೇವರ ಮುಂದೆ ದೀಪ ಹಚ್ಚಿಟ್ಟು ಭಕ್ತಿಯಿಂದ ಐದು ನಿಮಿಷಗಳ ಕಾಲ ಸ್ಮರಣೆ ಮಾಡಿದರೆ ಸಾಕು ಅಷ್ಟರಿಂದಲೇ ಭಗವಂತನು ತೃಪ್ತನಾಗಿ ಬೇಡಿದ್ದು ಕೊಡುತ್ತಾನೆ, ಅನುಗ್ರಹಿಸುತ್ತಾನೆ ಎನ್ನುವುದೇ ಇದರ ತತ್ವ.

7. ತಪಃ ಪುಷ್ಪಂ : ಪರಮಾತ್ಮನನ್ನು ಧ್ಯಾನಿಸುತ್ತಾ, ಪೂಜಿಸುತ್ತಾ ಕುಳಿತುಕೊಳ್ಳುವುದೇ ದೊಡ್ಡ ತಪಸ್ಸು, ವ್ಯಾಪಾರ ವ್ಯವಹಾರ ಸ್ಥಾನದಲ್ಲೂ ದೇವರ ಭಾವಚಿತ್ರದ ಮುಂದೆ ಬೆಳಗ್ಗೆ ಬಾಗಿಲು ತೆರೆದು ಸ್ವಚ್ಛ ಮಾಡಿ ಹೂವಿರಿಸಿ ಪ್ರಾತಃಕಾಲ ಸಂಧ್ಯಾಕಾಲಗಳಲ್ಲಿ ದೀಪ ಹಚ್ಚಿಟ್ಟು ಕೈಮುಗಿದು ಎರಡು ನಿಮಿಷಗಳ ಕಾಲ ಯಾರೊಡನೆಯೂ ಮಾತನಾಡದೇ ಧ್ಯಾನಿಸುವುದೇ ದೊಡ್ಡ ತಪಸ್ಸು. ಇದೇ ಈ ಪುಷ್ಪದ ಒಳಗಿನ ತತ್ವ.

8. ಕ್ರಿಯಾಪುಷ್ಪಂ : ನಮ್ಮ ಎಲ್ಲಾ ಕ್ರಿಯೆಯಲ್ಲೂ ಅಂದರೆ ಆಚರಣೆಯಲ್ಲಿ ಕ್ರಮಶಿಕ್ಷಣವಿರಬೇಕು.

1 ದೇವಾಲಯಕ್ಕೆ ಬಂದವರಿಗೆ ಹಿಂಸೆ ಕೊಡಬಾರದು ಹಿಂಸಾತ್ಮಕವಾದ ಮಾತುಗಳನ್ನಾಡಬಾರದು.

2. ಭಯಭರಿತರಾದ ಹೆಣ್ಣು ಹುಡುಗರು, ಹೆಂಗಸರು ದೇವಾಲಯಕ್ಕೆ ಬಂದಾಗ ಅವರನ್ನು ನೋಡುವ ದೃಷ್ಟಿಯಲ್ಲಿ ಹಾಗೂ ಮಾತನಾಡಿಸುವ ರೀತಿಯಲ್ಲಿ ಭಕ್ತಿ ತುಂಬಿರಬೇಕಾಗಲೀ ಬೇರೆ ಯಾವುದೇ ರೀತಿಯ ಭಾವನೆಯನ್ನು ವ್ಯಕ್ತಪಡಿಸಬಾರದು ಇದು ಇಂದ್ರಿಯ ನಿಗ್ರಹ ತತ್ವ.

3. ಎಲ್ಲಾ ಭಕ್ತಾದಿಗಳಲ್ಲೂ ಒಂದೇ ಭಾವನೆ ಇಡಬೇಕು ಅಂದರೆ ತುಂಬಾ ದಕ್ಷಿಣೆ ಕೊಡುವವರು ಸ್ವಲ್ಪ ದಕ್ಷಿಣೆ ಕೊಡುವವರು ಅಂತ ಭೇದಭಾವ ತೋರಿಸಬಾರದು ಎಲ್ಲರಿಗೂ ಸರಿಸಮಾನವಾದ ರೀತಿಯಲ್ಲಿ ತೀರ್ಥಪ್ರಸಾದ ಕೊಡುವುದನ್ನು ರೂಢಿಯಲ್ಲಿರಿಸಿಕೊಳ್ಳಬೇಕು ಇದೇ ಸರ್ವಭೂತದಯಾ ಪುಷ್ಪದ ತತ್ವ.

4. ಸತ್ಯವಾದ ಮಾತು ಸತ್ಯವಾದ ಆಚರಣೆ ಪೂಜೆ ನಡೆಸುವುದೇ ಸತ್ಯಪುಷ್ಪದ ತತ್ವ.

5 ಭಗವಂತನ ವಿಚಾರದಲ್ಲಿ ಜ್ಞಾನ ತಿಳಿದುಕೊಂಡು ಬೇರೆಯವರಿಗೂ ಬೋಧಿಸುವುದು ಹಾಗೂ ಜ್ಞಾನ ಪುಷ್ಪ ಪ್ರಸಾದ ಕೊಡುವುದೇ ಜ್ಞಾನ ಪುಷ್ಪ.

6. ತನ್ನ ಬಗ್ಗೆ ಭಕ್ತರ ಬಗ್ಗೆ ಧ್ಯಾನಮಾಡಿ ಅವರಿಗೆ ದೇವರು ಅನುಗ್ರಹಿಸುವಂತೆ ಮಾಡುವುದೇ ಧ್ಯಾನ ಪುಷ್ಪ.

7 ಸಮಯಕ್ಕೆ ಸರಿಯಾಗಿ ಬಾಗಿಲನ್ನು ತೆರೆದು ದೇವರ ದರ್ಶನವನ್ನು ಮಾಡಲು ಭಕ್ತರಿಗೆ ಅವಕಾಶ ಮಾಡಿಕೊಡುವುದು.

8. ಈ ಮೇಲಿನ ಎಲ್ಲಾ ವಿಚಾರಗಳನ್ನು ಸರಿಯಾದ ಮಾರ್ಗದಲ್ಲಿ ಆಚರಿಸಿ ತಮ್ಮ ಆಚಾರ ವಿಚಾರಗಳನ್ನು ಕ್ರಮಬದ್ಧವಾಗಿ ಇರಿಸಿಕೊಳ್ಳುವುದೇ ಕ್ರಿಯಾಪುಷ್ಪದ ತತ್ವ.

ಈ ಎಂಟು ಪುಷ್ಪಗಳನ್ನು ದೇವಾಲಯದ ಪರಮಾತ್ಮನಿಗೆ ಅರ್ಪಿಸಲು ಗೊತ್ತಿದ್ದರೆ ಮಾತ್ರ ಅವನು ಅರ್ಚನೆಮಾಡಲು ಅರ್ಹನಾಗಿರುತ್ತಾನೆ. ●



ವೈಭವದ ವಸಂತೋತ್ಸವ

ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿ ಆಲಯದ ವಾರ್ಷಿಕ ವಸಂತೋತ್ಸವ ಮೂರು ದಿನಗಳ ಕಾಲ 29-3-99 ರಿಂದ 31-3-99 ರ ವರೆಗೆ ಅತ್ಯಂತ ಉತ್ಸಾಹದಿಂದಲೂ ವೈಭವದಿಂದಲೂ ನಡೆದು ಯಶಸ್ವಿಯಾದವು. ಚೈತ್ರ ಮಾಸದ ಪೂರ್ಣಿಮೆಯ ದಿನದ ಆಚೀಚೆ ನಡೆದ ಉತ್ಸವಗಳಲ್ಲಿ ಮೊದಲನೆಯ ದಿನ ಸೋಮವಾರ ಶ್ರೀ ಮಲಯಪ್ಪಸ್ವಾಮಿಯನ್ನು ಉಭಯ ನಾಚ್ಚಿಯಾರರರೊಂದಿಗೆ ಮೆರವಣಿಗೆಯಲ್ಲಿ ಆಲಯದ ಹಿಂಬದಿಯ ವಸಂತ ಮಂಟಪಕ್ಕೆ ಊರಮೆರವಣಿಗೆಯಲ್ಲಿ ಕರೆತರಲಾಯಿತು ಅಲ್ಲಿ ಸ್ವಾಮಿಯ ಒಡ್ಡೋಲಗ ಕಣ್ಣಿಗೆ ಹಬ್ಬವಾಗಿ ನಡೆಯಿತು. ಎರಡನೆಯದಿನ ಮಂಗಳವಾರ ಸ್ವಾಮಿಯನ್ನೂ ಉಭಯ ನಾಯಕಿಯರನ್ನೂ ಬಂಗಾರದ ರಥದಲ್ಲಿ ಮೆರವಣಿಗೆಯಲ್ಲಿ ಊರಿನ ರಥಬೀದಿಗಳಲ್ಲಿ ಕರೆತರಲಾಯಿತು ಕರಿ ತುರಗ, ಗೋವುಗಳ ಭಕ್ತರ ದ್ರಾವಿಡ ಪ್ರಬಂಧ ಪಾರಕರ ವೇದಘೋಷದ ನಡುವೆ ಅಲಂಕರಿಸಿದ ತಿರುವಾಭರಣಗಳನ್ನು ಹೊಂದಿದ ಸ್ವಾಮಿಯು ಉಭಯ ನಾಯಕಿಯರೊಡನೆ ಬರುತ್ತಿರಲು ಭಕ್ತರು ಭಕ್ತಿಯಿಂದ ಸ್ವಾಮಿಯನ್ನು ತಮ್ಮ ಹೃದಯದೊಳಗೆ ಮೆರವಣಿಗೆ ಮಾಡಿಸಿದರು ಭಕ್ತರಿಗೆ ಇಷ್ಟವಾದ ಮೇವಾ (ಹಣ್ಣುಗಳಿಂದ ಮಾಡಿದ ಕೋಸಂಬರಿ) ಪ್ರಸಾದವನ್ನು ನಿವೇದಿಸಿದರು. ವಸಂತ ಮಂಟಪದಲ್ಲಿ ಓಲಗ ನಡೆದ ಮೇಲೆ ಈ ಪ್ರಸಾದ ವಿತರಣೆ ನಡೆಯಿತು ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಡಾ|| ಐ ವಿ. ಸುಬ್ಬಾರಾವ್ನ ಜೆ ಇ ಓ. ಶ್ರೀ ಬಾಲಸುಬ್ರಹ್ಮಣ್ಯಂ ಅರಣ್ಯಾಧಿಕಾರಿ ಶ್ರೀ ವೆಂಕಟ್ರಾಮಯ್ಯ ಸಿ. ಇ ಶ್ರೀ ಮುನಿರೆಡ್ಡಿ ಮತ್ತಿತರರು ಭಾಗವಹಿಸಿದ ಈ ಕಾರ್ಯಕ್ರಮದಲ್ಲಿ ವಸಂತಮಂಟಪದಲ್ಲಿ ಸ್ವಾಮಿಯ ಸ್ನಪನ ತಿರುಮಂಜನ ನಡೆಯಿತು. ನಂತರ ನಿವೇದನೆಯ ಸಮರ್ಪಣಾವಾಗಿ, ಆಸ್ಥಾನ ನಡೆಯಿತು ಅನಂತರ ಮೆರವಣಿಗೆಯಲ್ಲಿ ಸ್ವಾಮಿಯನ್ನು ದೇವೇರಿಯರೊಡನೆ ಆಲಯಕ್ಕೆ ಕರೆತರಲಾಯಿತು.

ಮೂರನೆಯ ದಿನ ಬುಧವಾರ ಶ್ರೀ ಮಲೆಯಪ್ಪಸ್ವಾಮಿ ಉಭಯ ನಾಯಕಿಯರು ಒಂದು ಪಲ್ಲಕ್ಕಿಯಲ್ಲಿ, ಮತ್ತೊಂದರಲ್ಲಿ, ಲಕ್ಷ್ಮಣಸ್ವಾಮಿ, ಶ್ರೀ ಕೋದಂಡರಾಮ ಸೀತಾದೇವಿಯರು, ಇನ್ನೊಂದು ಪಲ್ಲಕ್ಕಿಯಲ್ಲಿ ಶ್ರೀಕೃಷ್ಣರುಕ್ಮಿಣಿಯರು ಆಲಯದ ಹೊರಕ್ಕೆ ಬಂದು ವಸಂತ ಮಂಟಪಕ್ಕೆ ಮೆರವಣಿಗೆಯಲ್ಲಿ ಆಗಮಿಸಿದರು. ಒಂದು ಪಲ್ಲಕ್ಕಿಯಲ್ಲಿ ಆಂಜನೇಯಸ್ವಾಮಿಯನ್ನೂ ಕರೆತರಲಾಯಿತು ಅಲ್ಲಿ ಎಂದಿನಂತೆ ತಿರುಮಂಜನ, ಓಲಗ ಪ್ರಸಾದವಿತರಣೆ ನಡೆಯಿತು ಅಂದು ಸಂಜೆ ಮೆರವಣಿಗೆಯಲ್ಲಿ ಆಲಯಕ್ಕೆ ಹಿಂದಿರುಗಿದ ನಂತರ ಭಾಷ್ಯಕಾರ ಸನ್ನಿಧಿಯಲ್ಲಿ ಮಲಯಪ್ಪಸ್ವಾಮಿ ಶ್ರೀದೇವಿ ಭೂದೇವಿಯರ ಆಸ್ಥಾನ ನಡೆಯಿತು.





## ಕೋಲಾರದಲ್ಲಿ ಕಲ್ಯಾಣಮಂಟಪಕ್ಕಾಗಿ ವಂತಿಗೆ

ಕೋಲಾರದ ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯದ ಬಳಿಯ ಜಲರಹಿತ ಪುಷ್ಕರಿಣಿ ಸ್ಥಳದಲ್ಲಿ ತಿ ತಿ. ದೇವಸ್ಥಾನಗಳ ವತಿಯಿಂದ ಕಲ್ಯಾಣ ಮಂಟಪ ನಿರ್ಮಾಣ ಮಾಡಿಸಬೇಕೆಂಬ ಉದ್ದೇಶ ದಿವಾನ ಕರ್ನಾಟಕ ಶಾಸನ ಸಭೆಯ ಸ್ಥಳೀಯ ಪ್ರತಿನಿಧಿಗಳೂ, ಕ್ರಿಭೋ ಸಂಸ್ಥೆಯ ಅಧ್ಯಕ್ಷರೂ ಆದ ಶ್ರೀ ಕೆ ಶ್ರೀನಿವಾಸ ಗೌಡರ ಅಧ್ಯಕ್ಷತೆಯಲ್ಲಿ ಕಲ್ಯಾಣ ಮಂಟಪ ನಿರ್ಮಾಣ ಸಮಿತಿಯು ಈ ಹಿಂದೆ ಏರ್ಪಾಡಾಗಿದ್ದು, ತಿ. ತಿ ದೇವಸ್ಥಾನಗಳ ವತಿಯಿಂದ ಸ್ಥಳ ಪರಿಶೀಲನೆಗಾಗಿ ಧರ್ಮಕರ್ತರ ಮಂಡಳಿಯ ಅಧ್ಯಕ್ಷರು ಶ್ರೀ ಕಲಿದಿಂಡಿ ರಾಮಚಂದ್ರ ರಾಜು ಅವರೂ, (ಈಗ ಶ್ರೀಯುತರು ಆಂಧ್ರಪ್ರದೇಶದ ಮಂತ್ರಿ ಮಂಡಳದಲ್ಲಿ ಸೇರಿದ್ದಾರೆ) ಧರ್ಮಕರ್ತರ ಮಂಡಳಿಯ ಸದಸ್ಯರು ಶ್ರೀ ರಾಮಚಂದ್ರ ರಾಜು ತಿ.ತಿ.ದೇ. ಚೀಫ್ ಇಂಜನಿಯರ್ ಶ್ರೀ ಮುನಿರೆಡ್ಡಿ ಅವರೂ ಈ ಹಿಂದೆಯೇ ಕೋಲಾರಕ್ಕೆ ಆಗಮಿಸಿ ಕೆರೆಯಂಗಳದ ಪರಿಶೀಲನೆ ನಡೆಸಿದ ನಂತರ, ಇದೀಗ ಕಲ್ಯಾಣ ಮಂಟಪ ನಿರ್ಮಾಣ ನಿಯಮಗಳಿಗನುಸಾರವಾಗಿ ಸ್ಥಳೀಯ ವಂತಿಗೆಯಾಗಿ ಐದು ಲಕ್ಷ ರೂಪಾಯಿಗಳನ್ನು ಚೆಕ್ಕಿನ ಮೂಲಕ ತಿ ತಿ. ದೇವಸ್ಥಾನಗಳಿಗೆ ಒಪ್ಪಿಸಲಾಗಿದೆ.



ಏಪ್ರಿಲ್ 12 ರಂದು ಸೋಮವಾರ ತಿರುಪತಿಯಲ್ಲಿನ ತಿ. ತಿ ದೇವಸ್ಥಾನಗಳ ಪರಿಪಾಲನಾಭವನದಲ್ಲಿ ತಿ ತಿ.ದೇ. ಕಾರ್ಯನಿರ್ವಹಣಾಧಿಕಾರಿ ಡಾ|| ಐ. ವಿ. ಸುಬ್ಬಾರಾವ್ ಅವರಿಗೆ ಐದು ಲಕ್ಷ ರೂಗಳ ಚೆಕ್ ಅನ್ನು ಕಲ್ಯಾಣ ಮಂಟಪ ನಿರ್ಮಾಣ ಸಮಿತಿಯ ಅಧ್ಯಕ್ಷ ಶ್ರೀ ಕೆ ಶ್ರೀನಿವಾಸ ಗೌಡರು ನೀಡಿದರು. ಅವರ ಜೊತೆಯಲ್ಲಿ ಸಮಿತಿಯ ಖಜಾಂಚಿಗಳಾದ ಕೋಲಾರ ಪತ್ರಿಕೆಯ ಸಂಪಾದಕ ಶ್ರೀ ಕೆ ಪ್ರಹ್ಲಾದ ರಾವ್ ಅವರೂ ಸಮಿತಿಯ ಸದಸ್ಯ ಶ್ರೀ ಕೆ ಆರ್. ಶಂಕರ ಅವರೂ, ಕ್ರಿಭೋದ ತಿರುಪತಿ ಪ್ರತಿನಿಧಿ ಶ್ರೀ ಪ್ರತಾಪ್ ರೆಡ್ಡಿ ಅವರೂ ಇದ್ದರು

ತಿ. ತಿ. ದೇವಸ್ಥಾನಗಳ ವಶಕ್ಕೆ ಕಲ್ಯಾಣಮಂಟಪದ ಸ್ಥಳವನ್ನು ವಹಿಸಿಕೊಡುವ ಕಾರ್ಯ ಇನ್ನೂ ನಡೆಯಬೇಕಿದ್ದು ಎಲ್ಲ ಕಾರ್ಯಗಳೂ ಚುರುಕಾಗಿ ಶೀಘ್ರವಾಗಿ ನಡೆಯುವುವೆಂದು ಆಶಿಸಲಾಗಿದೆ

## ವಾಯಲ್ಪಾಡಿನಲ್ಲಿ

## ವೈಭವದ ಬ್ರಹ್ಮೋತ್ಸವ

ವಾಯಲ್ಪಾಡು ಗ್ರಾಮದ ಶ್ರೀ ಪಟ್ಟಾಭಿ ರಾಮಚಂದ್ರಸ್ವಾಮಿಯ ಆಲಯದಲ್ಲಿ ವೈಭವದಿಂದ ವಾರ್ಷಿಕ ಬ್ರಹ್ಮೋತ್ಸವಗಳು ನಡೆದು ಯಶಸ್ವಿಯಾದವು. ಬ್ರಹ್ಮೋತ್ಸವದ ಭಾಗವಾಗಿ ನಡೆದ ಬಂಗಾರದ ರಥದಲ್ಲಿ ಸೀತಾರಾಮಚಂದ್ರಸ್ವಾಮಿಯವರನ್ನು ಮೆರವಣಿಗೆ ಮಾಡಲಾಯಿತು ಅದರ ಹಿಂದಿನ ದಿನ ಸಂಜೆ ಸೀತಾರಾಮಕಲ್ಯಾಣ ವೈಭವದಿಂದ ನಡೆಯಿತು ಸ್ಥಾನಿಕ ಎಂ.ಎಲ್.ಎ. ಶ್ರೀ ಚಿಂತಲ ರಾಮಚಂದ್ರಾರೆಡ್ಡಿ, ಲೋಕಲ್ ಟೆಂಪಲ್ಸ್ ಡಿ ಇ ಓ ಶ್ರೀ ಲಕ್ಷ್ಮೀಪತಿ, ಎ.ಇ.ಓ. ಶ್ರೀ ಭಕ್ತವತ್ಸಲಂ ಪ್ರತ್ಯೇಕ ಆಹ್ವಾನಿತರಾಗಿ ಪಾಲುಗೊಂಡಿ

ಸ್ಥರು ತಿ ತಿ ದೇ ಧರ್ಮಪ್ರಚಾರಪರಿಷತ್ ಸ ಹತಿಯಿಂದಲೂ, ಅನ್ನಮಾಚಾರ್ಯ ಪ್ರಾಜೆಕ್ಟ್ ವತಿ ಯಿಂದಲೂ ಸಾಂಸ್ಕೃತಿಕ ಸಂಗೀತ ಕಾರ್ಯಕ್ರಮ ಗಳು ಏರ್ಪಾಡಾಗಿದ್ದವು. ಸೀತಾರಾಮ ಕಲ್ಯಾಣ ವನ್ನು ಆರ್ಜಿತ ಸೇವೆಯನ್ನಾಗಿ ಮಾಡಿಸಿದ ಗೃಹ ಸ್ಥರು ನೀಡಿದ ಶುಲ್ಕದ ಮೊತ್ತ ರೂ 12500 ಎನ್ನ ಲಾಗಿದೆ. ಸೀತಾರಾಮ ಕಲ್ಯಾಣದ ನಂತರ ಗರುಡ ವಾಹನದಲ್ಲಿ ಸ್ವಾಮಿಯ ಮೆರವಣಿಗೆಯಾಯಿತು. ಸಹಸ್ರಾರು ಮಂದಿ ಪ್ರತಿ ದಿನವೂ ಉತ್ಸವಗಳಲ್ಲಿ ಭಾಗವಹಿಸಿದ್ದರು.

## ಸುದರ್ಶನ ಕಂಕಣ ಪದ್ಧತಿಯ ವಿಸ್ತರಣ

ತಿರುಮಲೆಯ ಸ್ವಾಮಿ ಸಂದರ್ಶನದಲ್ಲಿ ಕಾಲ ಮಿತಿಯ ತೊಳಲಾಟವನ್ನು ತಪ್ಪಿಸುವ ಸುದರ್ಶನ ಕಂಕಣ ಪದ್ಧತಿ ಪ್ರಯೋಗಾತ್ಮಕವಾಗಿ ಪ್ರವೇಶಗೊ ಳಿಸಿದ್ದು ಯಶಸ್ವಿಯಾಗುತ್ತಿದ್ದು ಕಂಡು ಬಂದಿರುವು ದರಿಂದ ಈ ಕೂಡಲೇ ತಿರುಪತಿಯಲ್ಲಿ ಮೂರು ಕೇಂದ್ರಗಳಲ್ಲಿ ಈ ಕಂಕಣ ಧಾರಣೆಯ ಅವಕಾಶ ಗಳನ್ನು ಕಲ್ಪಿಸಬೇಕೆಂದು ತಿ.ತಿ.ದೇ. ಧರ್ಮಕರ್ತರ ಮಂಡಳಿ ತೀರ್ಮಾನಿಸಿದೆ

ದರ್ಶನವನ್ನು ಅಪೇಕ್ಷಿಸಿ ಬರುವವರಿಗೆ ಅವರು ದರ್ಶನ ಪಡೆಯಬಹುದಾದ ಸಮಯವನ್ನು ಸೂಚಿ ಸುವ ಟೇಪ್ ಒಂದನ್ನು ಅವರ ಕೈಗೆ ಕಟ್ಟುವುದ ರಿಂದ ಈ ಕಂಕಣಧಾರಿ ಭಕ್ತರು ತಮ್ಮ ಇತರತ್ರ ಕೆಲಸಗಳನ್ನು ನೋಡಿಕೊಂಡು ಸಮಯಕ್ಕೆ ಸರಿ ಯಾಗಿ ಸರತಿಯ ಸಾಲನ್ನು ಪ್ರವೇಶಿಸುವುದರಿಂದ ಒಂದು ಗಂಟೆಗೂ ಕಡಿಮೆಕಾಲ ವ್ಯವಧಿಯಲ್ಲಿ ಸ್ವಾಮಿಯ ದರ್ಶನ ಮಾಡಿಕೊಂಡು ಬರಬಹುದಾ ಗಿದೆ. (ಕೈಗೆ ಒಂದು ಸಾರಿ ಕಟ್ಟಿದ ಕಂಕಣವನ್ನು ಬಿಚ್ಚುವ ಅವಕಾಶವಿಲ್ಲವಾಗಿ ಈ ಕಂಕಣ ಧಾರಣೆ ಯಲ್ಲಿ ಯಾವ ರೀತಿಯ ಕೈಚಳಕವನ್ನೂ ತೋರು ವಂತಿಲ್ಲ) ಈ ಪದ್ಧತಿ ಪೂರ್ಣವಾಗಿ ಕಂಪ್ಯೂಟರೀಕೃ ತವಾಗಿದೆ. ಇದನ್ನು 1999 ರ ಯುಗಾದಿಯಿಂದ ಪ್ರವೇಶಗೊಳಿಸಲಾಗಿದ್ದು ಈಗ ತಿರುಪತಿಯಲ್ಲಿನ ರೈಲ್ವೆ ನಿಲ್ದಾಣ ಬಸ್ ನಿಲ್ದಾಣ, ಸತ್ರಗಳಲ್ಲಿ ಕಂಕಣ ಧಾರಣ ಕೇಂದ್ರಗಳನ್ನು ತೆರೆಯುವುದರ ಮೂಲಕ ಬೆಟ್ಟದ ಮೇಲಿನ ಯಾತ್ರಿಕ ಸಂದಣಿಯನ್ನು ಕಡಿಮೆ ಗೊಳಿಸಬಹುದೆಂದು ಯೋಚಿಸಲಾಗುತ್ತಿದೆ.

# ವಾಕಾಟಿ ಪಾಂಡುರಂಗರಾವ್ ನಿಧನ



ಆಂಧ್ರಪ್ರದೇಶದ ಖ್ಯಾತ ಪತ್ರಿಕಾ ವರ ದಿಗಾರರೂ, ಅತ್ಯುತ್ತಮ ಕಥನಕಾರರೂ ಉತ್ತಮ ವಾಗ್ಮಿಯೂ ಆಗಿದ್ದ ಶ್ರೀ ವಾಕಾಟಿ ಪಾಂಡುರಂಗರಾವ್ ಅವರು ಹೈದರಾಬಾ ದಿನಲ್ಲಿ ಅಲ್ಪಕಾಲದ ಅಸ್ವಸ್ಥತೆಯಿಂದ ಬಳ ಲುತ್ತಿದ್ದು ಏಪ್ರಿಲ್ 17 ರಂದು ಶನಿವಾರ ನಿಧ ನರಾದರೆಂದು ತಿಳಿಸಲು ಸಪ್ತಗಿರಿ ವಿಷಾದಿ ಸುತ್ತದೆ. ಮಾರನೆಯ ದಿನ ಭಾನುವಾರ ಅವರ ಅಂತ್ಯಕ್ರಿಯೆಗಳು ನಡೆದವು. ಅವರು ಪತ್ನಿ, ಮೂವರು ಪುತ್ರಿಯರು, ಒಬ್ಬ ಪುತ್ರ ಹಾಗೂ ಅಪಾರ ಅಭಿಮಾನಿಗಳನ್ನು ಶಿಷ್ಯ ಪ್ರಶಿಷ್ಯರನ್ನು ಬಿಟ್ಟು ಹೋಗಿದ್ದಾರೆ.

1934 ನವಂಬರ್ 15 ರಂದು ಮದರಾಸಿನಲ್ಲಿ ಹುಟ್ಟಿದ ವಾಕಾಟಿ ಪಾಂಡುರಂ ಗರಾವ್ ಅವರು ಟಂಗಟೂರಿ ಪ್ರಕಾಶಂ ಪಂತುಲು ಅವರೊಡನೆ ಪ್ರಜಾಪತ್ರಿಕೆಯ ಲ್ಲಿಯೂ, ಆನಂದವಾಣಿ, ಆಂಧ್ರಜ್ಯೋತಿ, ಪ್ರಜಾತಂತ್ರ, ನ್ಯೂಸ್‌ಟೈಂ, ಎ.ಪಿ. ಟೈಂಸ್ ಪತ್ರಿಕೆಗಳಲ್ಲಿಯೂ ಕೆಲಸ ಮಾಡಿ ಪ್ರಖ್ಯಾತರಾಗಿದ್ದರು ತೆಲುಗು ವಿಶ್ವವಿದ್ಯಾಲಯದ ಪತ್ರಿಕೋದ್ಯಮ ವಿಭಾಗದಲ್ಲಿ ಪ್ರಾಚಾರ್ಯರಾಗಿಯೂ ಕೆಲಸಮಾಡಿದರು. ಮಿತ್ರವಾಕ್ಯ ದಿಕ್ಸೂಚಿ, ಯಮುನಾತೀರೇ - ಮೊದಲಾದ ಪುಸ್ತಕಗಳೂ, ಅಸಂಖ್ಯಾತ ಕಥೆಗಳೂ ತೆಲು ಗಿನಲ್ಲಿ ಅವರ ಲೇಖನಿಯಿಂದ ಹೊರಬಂದು ಹೆಸರಾದವು.

ವಾಕಾಟಿ ಪಾಂಡುರಂಗರಾಯರ ಬಹುಮುಖ ಪ್ರತಿಭೆಯಿಂದಾಗಿ ತೆಲುಗು ಸಾಹಿ ತ್ಯದ ಹಲವಾರು ಉತ್ತಮ ಕೃತಿಗಳು ಆಂಗ್ಲ ಭಾಷೆಯಲ್ಲಿ ಬೆಳಕು ಕಾಣುವಂತಾಗಿ ಜಗತ್ತಿಗೆ ತೆಲುಗು ಸಾಹಿತ್ಯದ ಹಿರಿಮೆಗರಿಮೆಗಳ ಪರಿಚಯ ಮತ್ತಷ್ಟು ಹೆಚ್ಚಾಯಿತೆಂದು ಹೇಳಬ ಹುದು.

ಮಧ್ಯತರಗತಿ ಜೀವನವನ್ನು ಕನ್ನಡಿ ಹಿಡಿಯುವ ಅವರ ಕಥೆಗಳು ಜೀವನದ ವಿಮ ರ್ಶೆಯೂ ಆಗಿದ್ದಿತೆಂದು ತೆಲುಗು ಸಾಹಿತ್ಯದ ಹಿರಿಯರು ಹೇಳುವುದು ನಿಜವೆಂದೇ ಹೇಳ ಬೇಕು ಅವರು ಹಲವು ಹನ್ನೊಂದು ತೀರ್ಪುಗಾರರ ಸಮಿತಿಯಲ್ಲಿಯೂ ಯಶಸ್ವಿಯಾಗಿ ಕೆಲಸಮಾಡಿದ್ದರು. ಜ್ಞಾನ ಪೀಠ ಪ್ರಶಸ್ತಿ ಸಮಿತಿಯಲ್ಲಿಯೂ ತೆಲುಗು ಭಾಷೆಯ ಪರ ವಾಗಿ ಕೆಲಸಮಾಡಿದ ಶ್ರೀಯುತರು ತಿ. ತಿ. ದೇವಸ್ಥಾನಗಳ ಪ್ರಕಟನ ವಿಭಾಗದ ತಜ್ಞ ಸಮಿತಿಯಲ್ಲಿಯೂ ಸದಸ್ಯರಾಗಿ ಕೆಲಸ ಮಾಡಿದ್ದರು.

ಇಂತಹ ಎತ್ತರದ ಹಿರಿಯರು ಹೋದ ಖಾಲಿಯನ್ನು ಶ್ರೀ ವೆಂಕಟೇಶ್ವರಸ್ವಾಮಿ ತುಂಬಿ ಕೊಡಲೆಂದು ಪ್ರಾರ್ಥಿಸುತ್ತ ಮೃತರ ನೆನಪಿನಲ್ಲಿ ಶಿರಬಾಗಿ ನಮಿಸುತ್ತದೆ ಸಪ್ತಗಿರಿ.

- ಸಂಪಾದಕ.

## ದುರಸ್ತಿಯ ನಂತರ ಘಟ್ಟದ ರಸ್ತೆಯ ಆರಂಭ

ತಿರುಪತಿಯಿಂದ ತಿರುಮಲೆಗೆ ಹೋಗುವ ಬೆಟ್ಟದ ವಾಹನಗಳ ಹಾದಿಯಲ್ಲಿ ಮೊದಲನೆಯ ಘಟ್ಟದ ರಸ್ತೆ 1943 ರಲ್ಲಿ ನಿರ್ಮಾಣವಾಗಿದ್ದು ಪರಿಪೂರ್ಣವಾದ ಮರಮತ್ತು ಎಂಬುದು ಈ ಐವತ್ತೈದು ವರ್ಷದಲ್ಲಿ ನಡೆಯದೆಯೇ ಇದ್ದದ್ದು, ಇದೀಗ 1999 ರಲ್ಲಿ ಇಡೀ ರಸ್ತೆಯನ್ನು ದುರಸ್ತಿ ಮಾಡಿಸಿ ವಾಹನ ಸಂಚಾರಕ್ಕಾಗಿ ಕಳೆದ ಏಪ್ರಿಲ್ 19 ರಂದು ಸೋಮವಾರ ಬೆಳಗ್ಗೆ ತೆರೆಯಲಾಯಿತು.

1943 ರಲ್ಲಿ ಬೆಟ್ಟಕ್ಕೆ ವಾಹನ ಸಂಚಾರದ ರಸ್ತೆಯನ್ನು ನಿರ್ಮಿಸಲು ಯೋಜಿಸಿದ್ದು ಗ್ಯಾನನ್ ಹಾಗೂ ಡಂಕರ್ ಕಂಪನಿಯವರು 17.2 ಕಿ.ಮೀ. ದೂರದ ಹಾದಿಯನ್ನು ಎರಡು ವರ್ಷಗಳಲ್ಲಿ ಸುಮಾರು 5 ಲಕ್ಷ ರೂಗಳ ವೆಚ್ಚದಲ್ಲಿ ನಿರ್ಮಿಸಿ ಕೊಟ್ಟಿದ್ದರು. ಈ ರಸ್ತೆಯಲ್ಲಿ ಆಗಾಗ ಮಳೆಗಾಳಿಗಳಿಂದ, ವಾಹನ ಸಂಚಾರದ ಒತ್ತಡದಿಂದ, ತಗ್ಗು ತೆವರುಗಳುಂಟಾಗಿದ್ದರೂ ಅಲ್ಲಲ್ಲಿನ ಹಳ್ಳಗಳನ್ನು ಅಲ್ಲಲ್ಲಿಯೇ ಅಂದಂದಿಗೇ ಮುಚ್ಚಲಾಗುತ್ತಿದ್ದಿತು. 1976 ರಲ್ಲಿ 16.7 ಕಿ.ಮೀ. ದೂರದ ಎರಡನೇ ಘಟ್ಟದ ರಸ್ತೆ ನಿರ್ಮಾಣವಾಗಿ ಆ ರಸ್ತೆಯನ್ನು ಏರುಮುಖದ ಸಂಚಾರದ ವಾಹನಗಳಿಗಾಗಿ ಮೀಸಲಿಟ್ಟದ್ದರಿಂದ, ಇಳಿಮುಖ ಸಂಚಾರದ ವಾಹನಗಳ ಈ ಮೊದಲ ರಸ್ತೆಯ ಮೇಲೆ ಒತ್ತಡ ಕಡಮೆಯಾಗಿದ್ದಿತು ಆದರೂ ಇಡೀ ರಸ್ತೆ ಜೀರ್ಣವಾಗಿದ್ದುದರಿಂದ ಈ ರಸ್ತೆಯನ್ನು ಹೊಸದಾಗಿ ದುರಸ್ತಿ ಮಾಡಲು ತೀರ್ಮಾನಿಸಿ ಸುಮಾರು 1.69 ಕೋಟಿ ರೂಪಾಯಿಗಳ ವೆಚ್ಚದಲ್ಲಿ 12.5 ಕಿ.ಮೀ. ರಸ್ತೆಯನ್ನು ಡಾಂಬರು ರಸ್ತೆಯಾಗಿಯೂ, 4.7 ಕಿ.ಮೀ. ರಸ್ತೆಯನ್ನು ಸಿಮೆಂಟ್ ರಸ್ತೆಯನ್ನಾಗಿಯೂ ಪರಿವರ್ತಿಸಲಾಯಿತು ಇದಕ್ಕಾಗಿ 1999 ರ ಜನವರಿ 4 ರಿಂದ ಏಪ್ರಿಲ್ 10 ರ ವರೆಗೆ ಈ ಮೊದಲ ರಸ್ತೆಯನ್ನು ಪ್ರಯಾಣಿಕರ ವಾಹನಗಳ ಸಂಚಾರಕ್ಕೆ ತೆರೆಯದೆ, ಎರಡನೆಯ ಘಟ್ಟದ ರಸ್ತೆಯನ್ನು ದ್ವಿಮುಖ ಸಂಚಾರದ ರಸ್ತೆಯಂತೆ ಪರಿವರ್ತಿಸಲಾಗಿದ್ದಿತು. ಈಗ ಎರಡೂ ರಸ್ತೆಗಳೂ ತೆರವಾಗಿದ್ದು ಒಂದು ಮೇಲೇರಲೂ ಮತ್ತೊಂದು ಕೆಳಗಿಳಿಯಲೂ ಬಳಸಬಹುದಾಗಿದೆ. ಈಗ ಈ ರಸ್ತೆಗಳಲ್ಲಿ ಏಕ ಮುಖ ವಾಹನ ಸಂಚಾರ ಮತ್ತೆ ಜಾರಿಗೆ ಬಂದಿದೆ.

19-4-99 ರಂದು ಸೋಮವಾರ ಬೆಳಗ್ಗೆ 6 ಗಂಟೆಗೆ ತಿರುಮಲೆಯ ಗರುಡಾದ್ರಿ ನಗರದ ಉಕ್ಕಡದ ಬಳಿ ನಡೆದ ನವೀಕರಿಸಿದ ರಸ್ತೆ ಆರಂಭೋತ್ಸವ ಸಮಾರಂಭದಲ್ಲಿ ರಸ್ತೆ ಪೂಜೆ ಮಾಡಿ ರಸ್ತೆಯನ್ನು ಸಂಚಾರಕ್ಕೆ ತೆರೆದುಕೊಟ್ಟ ತಿ.ತಿ.ದೇ. ಸಹಕಾರ್ಯನಿರ್ವಹಣಾಧಿಕಾರಿ ಶ್ರೀ ಬಾಲಸುಬ್ರಹ್ಮಣ್ಯಂ ಅವರು ಆರಂಭದ ಪ್ರಯಾಣ ಮಾಡಿದ ಕಾರಿಗೆ ಶುಭವನ್ನು ಹಾರೈಸಿ ಕಳುಹಿಸಿಕೊಟ್ಟರು.

## ಆಸ್ಪತ್ರೆಯ ಆಡಳಿತದ ಬಗ್ಗೆ ನಿರ್ಣಯ

ತಿರುಪತಿಯಲ್ಲಿನ ಶ್ರೀ ವೆಂಕಟೇಶ್ವರ ವೈದ್ಯವಿಜ್ಞಾನ ಸಂಸ್ಥೆ (ಸ್ವಿಮ್ಸ್) ರೂಯಾ ಆಸ್ಪತ್ರೆ ವೈದ್ಯಕೀಯ ಕಾಲೇಜು, ಪ್ರಸೂತಿ ಆಸ್ಪತ್ರೆಗಳನ್ನು ತಿ.ತಿ ದೇ. ಕೇಂದ್ರ ಆಸ್ಪತ್ರೆ, ಅಂಗವಿಕಲ ಚಿಕಿತ್ಸಾ ಕೇಂದ್ರಗಳೊಡನೆ ತಿ ತಿ ದೇವಸ್ಥಾನಗಳ ಆಡಳಿತ ಪಂಕ್ತಿಗೆ ಒಪ್ಪಿಸಬೇಕೆಂಬ ಆಂಧ್ರಪ್ರದೇಶ ಸರಕಾರದ ಸಲಹೆಯನ್ನು ಒಪ್ಪುತ್ತ ತಿ ತಿ.ದೇ. ಧರ್ಮಕರ್ತರ ಮಂಡಳಿ ತೀರ್ಮಾನ ಕೈಗೊಂಡಿದೆ.

ಏಪ್ರಿಲ್ ತಿಂಗಳ ಮೊದಲಭಾಗದಲ್ಲಿ ತಿರುಪತಿಯಲ್ಲಿ ಸಮಾವೇಶವಾದ ಧರ್ಮಕರ್ತರ ಮಂಡಳಿಯು ಸರ್ಕಾರದ ಪ್ರತಿಪಾದನೆಗಳನ್ನು ಒಪ್ಪುತ್ತ ಮೂರು ನಿಬಂಧನೆಗಳನ್ನು ವಿಧಿಸಿದೆ. ಅವುಗಳೆಂದರೆ 1) ಆಸ್ಪತ್ರೆಗಳ ನಿರ್ವಹಣಾ ವೆಚ್ಚ ಅಧಿಕವಾಗಬಾರದು, 2) ಸರ್ಕಾರ ಆಸ್ಪತ್ರೆ ಕಾಲೇಜುಗಳ ನಿರ್ವಹಣೆಗಾಗಿ ನೀಡುತ್ತಿದ್ದ ವಾರ್ಷಿಕ ಅನುದಾನಗಳನ್ನು ಮುಂದುವರಿಸಬೇಕು 3) ಸಂಬಳ ಸಾರಿಗೆಗಳು ಈಗಿನಂತೆಯೇ ಮುಂದುವರಿಯಬೇಕು. ಈ ನಿಬಂಧನೆಗಳಿಗೆ ಸರ್ಕಾರ ಒಪ್ಪಿದಲ್ಲಿ ಈ ಆಸ್ಪತ್ರೆ ಕಾಲೇಜುಗಳನ್ನು ತಿ.ತಿ ದೇ. ಆಡಳಿತದಲ್ಲಿ ತೆಗೆದುಕೊಳ್ಳುವ ವಿಧಿ ನಿಯಮಗಳ ನಿರ್ಣಯಕ್ಕೆ ಒಂದು ಉನ್ನತ ಮಟ್ಟದ ಉಪ ಸಮಿತಿಯನ್ನು ನೇಮಿಸಿ, ಅದರ ಶಿಫಾರಸುಗಳನ್ನು ಪಡೆಯಲಾಗುವುದು.

ತಿ. ತಿ ದೇವಸ್ಥಾನಗಳ ಧರ್ಮಕರ್ತರ ಮಂಡಳಿಯ ಸಮಾವೇಶವು ಆಂಧ್ರಪ್ರದೇಶ ಮುಜರಾಯಿ ಇಲಾಖಾ ಕಮಿಷನರ್ ಶ್ರೀ ಬಾಲಸುಬ್ರಹ್ಮಣ್ಯಂ ಅವರ ಅಧ್ಯಕ್ಷತೆಯಲ್ಲಿ ನಡೆದು, ಸದಸ್ಯರುಗಳಾದ ಶ್ರೀಮತಿ ಇ ಸೀತಾರಾಮಮ್ಮ ಶ್ರೀಮತಿ ಎ. ಸೀತಾದೇವಿ ಶ್ರೀ ಮಹದೇವನಾಯುಡು, ಶ್ರೀ ರಾಜಮೋಹನ ರೆಡ್ಡಿ, ಶ್ರೀ ನರಸಿಂಹುಲು, ಕಾರ್ಯನಿರ್ವಹಣಾಧಿಕಾರಿ ಶ್ರೀ ಡಾ|| ಐ ವಿ ಸುಬ್ಬಾರಾವ್ ಅವರುಗಳು ಭಾಗವಹಿಸಿದ್ದರು.

ಪತ್ರಕರ್ತರಿಗೆ ಸಮಾವೇಶದ ವಿವರಗಳನ್ನು ನೀಡಿದ ಸಭೆಯಲ್ಲಿ ತಿ.ತಿ.ದೇ. ಸಹಕಾರ್ಯನಿರ್ವಹಣಾಧಿಕಾರಿ ಶ್ರೀ ಬಾಲಸುಬ್ರಹ್ಮಣ್ಯಂ ಹಾಗೂ ಪೌರ ಸಂಬಂಧಾಧಿಕಾರಿ ಶ್ರೀ ಸುಭಾಷ್ ಗೌಡ್ ಅವರುಗಳು ಉಪಸ್ಥಿತರಿದ್ದರು.

## ನೂತನ ಅಧ್ಯಕ್ಷರು

ತಿ.ತಿ.ದೇ ಧರ್ಮಕರ್ತರ ಮಂಡಳಿಗೆ ಇದುವ ಗೆ ಅಧ್ಯಕ್ಷರಾಗಿದ್ದ ಶ್ರೀ ಕಲಿದಿಂಡಿ ರಾಮಚಂದ್ರ ಜು ಅವರು ಆಂಧ್ರಪ್ರದೇಶದ ಮಂತ್ರಿವರ್ಗದಲ್ಲಿ ನ ಪಡೆದುದರಿಂದ ತೆರವಾದ ಅವರ ಸ್ಥಳದಲ್ಲಿ ಷ್ಣಜಿಲ್ಲೆಯ ಮಲ್ಲೇಶ್ವರಂ ಎಂ ಎಲ್ ಎ ಶ್ರೀ ಗಿತ ವೆಂಕಟ್ರಾವು ಅವರನ್ನು ಅಧ್ಯಕ್ಷರನ್ನಾಗಿ ಆಂಧ್ರ ದೇಶ ಸರ್ಕಾರ ನೇಮಕಮಾಡಿದೆ.

ತಿರುಮಲೆಯಲ್ಲಿ ನಿರಂತರವಾದ ಯಾತ್ರಿಕರ ಂದು ಕೊರತೆಗಳನ್ನು ವಿಚಾರಿಸುತ್ತ ಅವರ ಯಾತ್ರೆ ಯನ್ನು ಸುಖಪ್ರದವಾಗಿಸುವುದೇ ಅತ್ಯಂತ ಹೆಚ್ಚಿನ ರವಾನ್ವಿತ ಸೇವೆಯೆಂದು ಶ್ರೀ ಕಾಗಿತ ವೆಂಕಟ್ರಾವು ವರು ತಿಳಿಸಿದ್ದಾರೆ.

ಶ್ರೀ ಕಾಗಿತ ವೆಂಕಟ್ರಾವು ಅವರು ಏಪ್ರಿಲ್ 30 ಂದು ಶುಕ್ರವಾರ ಬೆಳಗ್ಗೆ ತಿರುಮಲೆಯ ಆಲ ುದ ಗರುಡಾಳ್ವಾರರ ಸನ್ನಿಧಿಯಲ್ಲಿ (ತಿರುಮಾ ಣಿ ಮಂಟಪದಲ್ಲಿ) ದೇವರ ಎದುರಿಗೆ ನಡೆದ ಮಾರಂಭದಲ್ಲಿ ಧರ್ಮಕರ್ತರ ಮಂಡಳಿಯ ಅಧ್ಯ ರಾಗಿ ಪ್ರಮಾಣವಚನ ಸ್ವೀಕರಿಸಿದರು ಡಾ|| ಐ ಸುಬ್ಬಾರಾವು ಅವರು ಶ್ರೀಯುತರಿಗೆ ಅಧ್ಯಕ್ಷ ಪದ ಯ ಪ್ರಮಾಣ ವಚನವನ್ನು ನೀಡಿದರು

ಈ ಸಮಾರಂಭದಲ್ಲಿ ಆಂಧ್ರಪ್ರದೇಶದ ರಸ್ತೆ ುತ್ತು ಭವನಗಳ ಇಲಾಖೆ ಮಂತ್ರಿ ಶ್ರೀ ಬಿ ೋಪಾಲಕೃಷ್ಣಾರೆಡ್ಡಿ, ತಿ.ತಿ.ದೇ ಧರ್ಮಕ ್ತರ ಮಂಡಳಿಯ ಸದಸ್ಯರಾದ ಸರ್ವಶ್ರೀ ರಾಮಾ ಾಯುಡು, ಮಹದೇವನಾಯುಡು, ಶ್ರೀನಿವಾಸ ಾವ್, ಶ್ರೀಮತಿಯರಾದ ಎ. ಸೀತಾದೇವಿ, ಇ. ೀತಾರಾಮಮ್ಮ ಮೊದಲಾದವರು ಹಾಜರಿದ್ದರು.

## ವೇದ ವಿದ್ಯಾಕೇಂದ್ರ

ತಿ. ತಿ. ದೇವಸ್ಥಾನಗಳ ಧರ್ಮಕರ್ತರ ಮಂಡ ಯ ವೇದ ವಿಜ್ಞಾನದ ಉನ್ನತ ಅಧ್ಯಯನ ಕೇಂದ್ರ ನ್ನು ಒಂದು ಕೋಟಿ ರೂಪಾಯಿಗಳ ವೆಚ್ಚದಲ್ಲಿ ಸ್ಥಾಪಿಸಲು ತೀರ್ಮಾನಿಸಿದೆ

ಏಪ್ರಿಲ್ ತಿಂಗಳ ಕೊನೆಯ ಎರಡು ದಿನಗ ಂದು ನಡೆದ ಧರ್ಮಕರ್ತರ ಮಂಡಳಿಯ ಸಮಾ ೇಶದಲ್ಲಿ ಈ ನಿರ್ಣಯವನ್ನು ಕೈಗೊಳ್ಳಲಾಯಿತು.



ಶ್ರೀ ವೆಂಕಟೇಶ್ವರ ವೇದವಿದ್ಯಾನಿಧಿ ಎಂಬ ಹೆಸರಿನಲ್ಲಿ ಒಂದು ಟ್ರಸ್ಟ್ ಅನ್ನು ಏರ್ಪಡಿಸದೇಕೆಂದೂ ತೀರ್ಮಾನಿಸಲಾಗಿದೆ. ವೇದಗಳ ವಿಸ್ತೃತ ಪ್ರಚಾರವನ್ನು ಈ ನಿಧಿಯಿಂದ ನಡೆಸಲಾಗುವುದು ತಿರುಮಲೆಯ ಧರ್ಮಗಿರಿಯಲ್ಲಿನ ವೇದ ಪಾಠಶಾಲೆಯ ಶತಮಾನೋತ್ಸವಗಳು ಜುಲೈ 5 ರಿಂದ ಮೂರು ದಿನಗಳ ಕಾಲ ನಡೆಯಲಿದ್ದು ಈ ಅವಕಾಶವನ್ನು ವೇದಸಾರವನ್ನು ಪ್ರಚಾರ ಮಾಡಲು ಬಳಸಿಕೊಳ್ಳಲಾಗುವುದು

ಪತ್ರಿಕಾ ಸಮಾವೇಶದಲ್ಲಿ ಮಂಡಳಿಯ ತೀರ್ಮಾನಗಳ ಬಗ್ಗೆ ತಿಳಿಸುತ್ತ ಈ ವಿವರಗಳನ್ನು ತಿ.ತಿ ದೇ ಕಾರ್ಯನಿರ್ವಹಣಾಧಿಕಾರಿ ಡಾ|| ಐ ವಿ. ಸುಬ್ಬಾರಾವು ಅವರು ನೀಡಿದರು.





## ವೈಭವದ ಮೆಟ್ಲೋತ್ಸವ

ತಿರುಪತಿಯ ಅಲಿಪಿರಿಯಿಂದ ಕಾಲುಹಾದಿಯ ಮೆಟ್ಟಿಲುಗಳಿಗೆ ಪೂಜೆ ಮಾಡುತ್ತ ಬೆಟ್ಟವನ್ನೇರುವ, ತಿರುಪತಿ ಮೆಟ್ಲೋತ್ಸವ ಸಂಘದ ಮೆಟ್ಲೋತ್ಸವ ಪ್ರತಿಬಾರಿಯೂ ಸೌರಮಾನ ಯುಗಾದಿಯ ನಂತರದ ಮೊದಲ ಮಂಗಳವಾರ ನಡೆಯುವುದಿದ್ದು ಈ ಬಾರಿ ಏಪ್ರಿಲ್ 20 ರಂದು ಉತ್ಸಾಹ ಸಂಭ್ರಮಗಳಿಂದ ಮೂವತ್ತನೆಯ ವರ್ಷದ ಮೆಟ್ಲೋತ್ಸವ ನೆರವೇರಿತು

ತಮಿಳುನಾಡು, ಆಂಧ್ರಪ್ರದೇಶ, ಕರ್ನಾಟಕ ಕೇರಳ ರಾಜ್ಯಗಳಿಂದಾದ 192 ಭಜನಸಂಘಗಳು ಈ ಮೆಟ್ಲೋತ್ಸವದಲ್ಲಿ ಪಾಲುಗೊಂಡಿದ್ದವು. ಭಜನೆ, ಕೋಲಾಟ, ಭಕ್ತ ದಾಸ ವೇಷಗಳಲ್ಲಿ ಮೆಟ್ಟಿಲ ಪೂಜೆ ಮಾಡುತ್ತ ಬೆಟ್ಟವೇರಿ ಸ್ವಾಮಿ ದರ್ಶನ ಪಡೆದವರು ಐದುಸಾವಿರಕ್ಕಿಂತ ಹೆಚ್ಚು

ಮೆಟ್ಲ ಉತ್ಸವದ ಅಂಗವಾಗಿ ಏಪ್ರಿಲ್ 19 ರಂದೆ ಎಲ್ಲ ಭಜನಸಂಘಗಳೂ ತಿರುಪತಿಯಲ್ಲಿ ಸೇರಿದ್ದವು. ತಿರುಪತಿಯ ಎರಡನೇ ಸತ್ರದಿಂದ ಮೆರವಣಿಗೆಯಲ್ಲಿ ತಿರುಚಾನೂರಿಗೆ ಹೊರಟು ಶ್ರೀ ಪದ್ಮಾವತೀ ಅಮ್ಮನವರನ್ನು ಸಂದರ್ಶಿಸಿ ತಿರುಪತಿಗೆ ಹಿಂದಿರುಗಿದ ನಂತರ ಶ್ರೀ ಗೋವಿಂದರಾಜಸ್ವಾಮಿಯ ದರ್ಶನ ಪಡೆದು ತಿರುಪತಿಯ ನಗರಬೀದಿಗಳಲ್ಲಿ ಸಾಮೂಹಿಕ ಭಜನೆ ಮಾಡುತ್ತ ಮೆರವಣಿಗೆಯಲ್ಲಿ ಅನ್ನಮಾಚಾರ್ಯ ಕಲಾಮಂದಿರವನ್ನು ತಲುಪಿದವು. ಇಲ್ಲಿ ಭಕ್ತ ಭಜಕರಿಗೆ ಬೆಟ್ಟವನ್ನೇರುವ ಹಾದಿಯಲ್ಲಿನ ಎಡರು ತೊಡರುಗಳನ್ನು, ಸುಖ ಸೌಲಭ್ಯಗಳನ್ನು ತಿಳಿಸಿ ಭಕ್ತಿ ಗೌರವಾದರಗಳ ಶಿಸ್ತು, ಸಂಘಟನೆಗಳ ಬಗ್ಗೆ ನಿರ್ದೇಶನ ನೀಡಲಾಯಿತು

20 ರಂದು ಬೆಳಗ್ಗೆ ಅಲಿಪಿರಿಯ ಪಾದಾಲ ಮಂಟಪದಲ್ಲಿ ನೆರದ ಭಕ್ತರು ಮೆಟ್ಟಿಲ ಪ್ರಥಮ ಪೂಜೆಯಲ್ಲಿ ಪಾಲುಗೊಂಡರು. ಶ್ರೀ ಶ್ರೀ ಅನಂತನಾರಾಯಣ ಸ್ವಾಮಿಜೇ, ಶ್ರೀ ಶ್ರೀ ಶಂಕರಾನಂದ ಸ್ವಾಮಿಜೇ ಅವರುಗಳೂ ಈ ಆರಂಭೋತ್ಸವದಲ್ಲಿ ಪಾಲುಗೊಂಡು ನಂತರ ಬೆಟ್ಟವನ್ನೇರುವಲ್ಲಿ ನೇತೃತ್ವವನ್ನು ನೀಡಿದರು ತಿ.ತಿ.ದೇ ಸಹಕಾರ್ಯನಿರ್ವಹಣಾಧಿಕಾರಿ ಶ್ರೀ ರಾಮಕೃಷ್ಣಯ್ಯ, ಪೌರಸಂಬಂಧಾಧಿಕಾರಿ ಶ್ರೀ ಸುಭಾಷ್‌ಗೌಡ್, ಧರ್ಮಪ್ರಚಾರಪರಿಷತ್ ಕಾರ್ಯದರ್ಶಿ ಶ್ರೀ ಸಮುದ್ರಾಲ ಲಕ್ಷ್ಮಣಯ್ಯ ಮೊದಲಾದವರು ಹಾಜರಿದ್ದರು.

ಭಜನ ಬೃಂದಗಳಲ್ಲಿ ಬಂದ ಸ್ತ್ರೀಯರು ತಿರುಮಲೆಯ ಕಾಲುಹಾದಿಯ ಮೆಟ್ಟಿಲುಗಳಿಗೆ ಹರಿಷಿಣ ಕುಂಕುಮಗಳನ್ನು ಪೂಸಿ ಪೂಜಿಸಿದರೆ, ಪುರುಷರು ಪುಷ್ಪಗಳನ್ನೆರಚಿ ಗೌರವಿಸಿ ಮುಂದೆ ನಡೆದರು. ಹರಿನಾಮ ಸಂಕೀರ್ತನೆ ಮಾಡುತ್ತ ಬೆಟ್ಟವನ್ನು ಸೇರಿದಾಗ ಗರುಡಾದ್ರಿ ನಗರದಲ್ಲಿ ಅವರನ್ನು ತಿರುಮಲೆಯ ತಿ ತಿ ದೇ ಸಹಕಾರ್ಯನಿರ್ವಹಣಾಧಿಕಾರಿ ಶ್ರೀ ಬಾಲಸುಬ್ರಹ್ಮಣ್ಯಂ ಸ್ವಾಗತಿಸಿದರು ಭಜನ ವೃಂದಗಳು ಬೆಟ್ಟದ ರಥ ಬೀದಿಯಲ್ಲಿ ಮೆರವಣಿಗೆಯಲ್ಲಿ ಬಂದು ಸ್ವಾಮಿಯನ್ನು ಸಂದರ್ಶಿಸಿದರು

ಮೆಟ್ಲೋತ್ಸವದ ಸಲುವಾಗಿ ತಿರುಮಲೆಯ ಆಸ್ಥಾನ ಮಂಟಪದಲ್ಲಿ ಸಾಂಸ್ಕೃತಿಕ ಕಾರ್ಯಕ್ರಮಗಳು ಏರ್ಪಾಡಾಗಿದ್ದವು. ಭಕ್ತರಿಗೆ ಉಚಿತ ವಸತಿ ಭೋಜನ ಸೌಲಭ್ಯಗಳನ್ನು ಸುಖವಾದ ಸ್ವಾಮಿ ಸಂದರ್ಶನವನ್ನು ತಿ ತಿ. ದೇವಸ್ಥಾನಗಳು ಏರ್ಪಡಿಸಿದ್ದವು.



Edited and Published on behalf of TT Devasthanams by Dr N S Rama Murthy, M A , and Printed at T T D Press by M Lakshmana Rao, M A , L P T , Manager, T T D Press, Tirupati - 517 507

# ತಿರುಪತಿ ರೈಲುಗಳ ಆಗಮನ ನಿರ್ಗಮನಗಳು

ತಿರುಪತಿಗೆ ಬರುವ ಹಾಗೂ ತಿರುಪತಿಯಿಂದ ಹೊರಡುವ ರೈಲುಗಳ ಬ್ರಾಡ್‌ಗೇಜ್ ಹಾಗೂ ಮಿಾಟರ್‌ಗೇಜ್ ರೈಲುಗಳ ವಿವರಗಳನ್ನು ಇಲ್ಲಿ ಪಟ್ಟಿ ಮಾಡಲಾಗಿದೆ ಪಾಠಕ ಯಾತ್ರಿಕರು ಗಮನಿಸಿ ತಮ್ಮ ಪ್ರಯಾಣವನ್ನು ಸುಖಕರ ಮಾಡಿಕೊಳ್ಳಬೇಕೆಂದು ಕೋರಲಾಗಿದೆ

| ರೈಲು ವಿವರ | ತಿರುಪತಿ ಸೇರುವ ವೇಳೆ | ತಿರುಪತಿ ಬಿಡುವ ವೇಳೆ |
|---|---|---|
| | ಬ್ರಾಡ್‌ಗೇಜ್ | |
| ಕಾಕಿನಾಡ (ಪ್ಯಾಸೆಂಜರ್) | ಬೆಳಗ್ಗೆ 3-15 ಗಂಟೆಗೆ | ರಾತ್ರಿ 23-30 ಗಂಟೆಗೆ |
| ಮೈಸೂರು (ಪ್ಯಾಸೆಂಜರ್) | ಬೆಳಗ್ಗೆ 4-00 ಗಂಟೆಗೆ | ರಾತ್ರಿ 22-00 ಗಂಟೆಗೆ |
| ಸಿಕಂದರಾಬಾದ್ (ನಾರಾಯಣಾದ್ರಿ ಎಕ್ಸ್‌ಪ್ರೆಸ್) | ಬೆಳಗ್ಗೆ 6-25 ಗಂಟೆಗೆ | ಸಂಜೆ 18-30 ಗಂಟೆಗೆ |
| ವಿಶಾಖಪಟ್ನಂ (ತಿರುಮಲ ಎಕ್ಸ್‌ಪ್ರೆಸ್) | ಬೆಳಗ್ಗೆ 7-35 ಗಂಟೆಗೆ | ರಾತ್ರಿ 19-00 ಗಂಟೆಗೆ |
| ಹೈದರಾಬಾದು (ರಾಯಲಸೀಮೆ ಎಕ್ಸ್‌ಪ್ರೆಸ್) | ಬೆಳಗ್ಗೆ 9-05 ಗಂಟೆಗೆ | ಸಂಜೆ 15-30 ಗಂಟೆಗೆ |
| ಮದ್ರಾಸು (ಸಪ್ತಗಿರಿ ಎಕ್ಸ್‌ಪ್ರೆಸ್) | ಬೆಳಗ್ಗೆ 9-30 ಗಂಟೆಗೆ | ಬೆಳಗ್ಗೆ 10-05 ಗಂಟೆಗೆ |
| ಒಂಗೋಲು (ಪ್ಯಾಸಿಂಜರ್) | ಮಧ್ಯಾಹ್ನ 12-00 ಗಂಟೆಗೆ | ಮಧ್ಯಾಹ್ನ 14-15 ಗಂಟೆಗೆ |
| ಕೊಚ್ಚಿನ್ - ವಾರಣಾಸಿ (ವಾರಣಾಸಿ ಎಕ್ಸ್‌ಪ್ರೆಸ್) (ತಿರುಪತಿಯ ಮೂಲಕ ಮಂಗಳವಾರಗಳಲ್ಲಿ) | ಮಧ್ಯಾಹ್ನ 13-15 ಗಂಟೆಗೆ | ಮಧ್ಯಾಹ್ನ 13-45 ಗಂಟೆಗೆ (ಮಂಗಳವಾರ) |
| ವಾರಣಾಸಿ - ಕೊಚ್ಚಿನ್ (ಕೊಚ್ಚಿನ್ ಎಕ್ಸ್‌ಪ್ರೆಸ್) (ತಿರುಪತಿ ಮೂಲಕ ಭಾನುವಾರಗಳಲ್ಲಿ) | ಮಧ್ಯಾಹ್ನ 13-15 ಗಂಟೆಗೆ | ಮಧ್ಯಾಹ್ನ 13-45 ಗಂಟೆಗೆ (ಭಾನುವಾರ) |
| ವಾರಣಾಸಿ - ತಿರುಪತಿ (ವಾರಣಾಸಿ ಎಕ್ಸ್‌ಪ್ರೆಸ್) ಮಂಗಳವಾರ - ಭಾನುವಾರಗಳಲ್ಲಿ | ಮಧ್ಯಾಹ್ನ 13-20 ಗಂಟೆಗೆ | ಮಧ್ಯಾಹ್ನ 13-45 ಗಂಟೆಗೆ |
| ಪೂರಿ - ತಿರುಪತಿ (ಪೂರಿ ಎಕ್ಸ್‌ಪ್ರೆಸ್) ಬುಧ - ಶುಕ್ರವಾರಗಳಲ್ಲಿ | ಮಧ್ಯಾಹ್ನ 13-25 ಗಂಟೆಗೆ | ಬೆಳಗ್ಗೆ 9-45 ಗಂಟೆಗೆ |
| ಮದರಾಸು - ತಿರುಪತಿ (ಸಪ್ತಗಿರಿ ಎಕ್ಸ್‌ಪ್ರೆಸ್) | ಮದ್ಯಾಹ್ನ 16-50 ಗಂಟೆಗೆ | ಸಂಜೆ 17-30 ಗಂಟೆಗೆ |
| ತಿರುಪತಿ - ಕಡಪ (ಇಂಟರ್‌ಸಿಟಿ ಎಕ್ಸ್‌ಪ್ರೆಸ್) | ರಾತ್ರಿ 20-15 ಗಂಟೆಗೆ | ಬೆಳಗ್ಗೆ 6-30 ಗಂಟೆಗೆ |
| ತಿರುಪತಿ - ಗೂಡೂರು (ಗೂಡೂರು ಪ್ಯಾಸೆಂಜರ್) | ರಾತ್ರಿ 20-30 ಗಂಟೆಗೆ | ಬೆಳಗ್ಗೆ 6-25 ಗಂಟೆಗೆ |
| ಹೈದರಾಬಾದು (ಕೃಷ್ಣಾ ಎಕ್ಸ್‌ಪ್ರೆಸ್) | ರಾತ್ರಿ 21-30 ಗಂಟೆಗೆ | ಬೆಳಗ್ಗೆ 5-30 ಗಂಟೆಗೆ |
| ಅರಕೋಣಂ ಅರಕೋಣಂ ಪ್ಯಾಸೆಂಜರ್ | ರಾತ್ರಿ 23-15 ಗಂಟೆಗೆ | ಬೆಳಗ್ಗೆ 4-05 ಗಂಟೆಗೆ |
| | ಮಿಾಟರ್ ಗೇಜ್ ರೈಲುಗಳು | |
| ಮಧುರೆ (ಮಿಾನಾಕ್ಷಿ ಎಕ್ಸ್‌ಪ್ರೆಸ್) | ಬೆಳಗ್ಗೆ 4-50 ಗಂಟೆಗೆ | ಮಧ್ಯಾಹ್ನ 15-40 ಗಂಟೆಗೆ |
| ಗುಂತಕಲ್ (ಗುಂತಕಲ್ ಪ್ಯಾಸೆಂಜರ್) | ಬೆಳಗ್ಗೆ 5-15 ಗಂಟೆಗೆ | ಬೆಳಗ್ಗೆ 6-00 ಗಂಟೆಗೆ |
| ಕಾಟ್ಪಾಡಿ (ಕಾಟ್ಪಾಡಿ ಪ್ಯಾಸೆಂಜರ್) | ಬೆಳಗ್ಗೆ 8-55 ಗಂಟೆಗೆ | ಬೆಳಗ್ಗೆ 10-30 ಗಂಟೆಗೆ |
| ಮಹಬೂಬ್ ನಗರ್ (ವೆಂಕಟಾದ್ರಿ ಎಕ್ಸ್‌ಪ್ರೆಸ್) | ಬೆಳಗ್ಗೆ 9-30 ಗಂಟೆಗೆ | ಬೆಳಗ್ಗೆ 14-40 ಗಂಟೆಗೆ |
| ಕಾಟ್ಪಾಡಿ (ಕಾಟ್ಪಾಡಿ ಪ್ಯಾಸೆಂಜರ್) | ಬೆಳಗ್ಗೆ 11-25 ಗಂಟೆಗೆ | ಸಂಜೆ 17-30 ಗಂಟೆಗೆ |
| ಕಾಟ್ಪಾಡಿ (ಕಾಟ್ಪಾಡಿ ಪ್ಯಾಸೆಂಜರ್) | ಮಧ್ಯಾಹ್ನ 14-35 ಗಂಟೆಗೆ | ಬೆಳಗ್ಗೆ 7-00 ಗಂಟೆಗೆ |
| ಗುಂತಕಲ್ (ಗುಂತಕಲ್) | ಸಂಜೆ 18-45 ಗಂಟೆಗೆ | ರಾತ್ರಿ 21-45 ಗಂಟೆಗೆ |
| ಕಾಟ್ಪಾಡಿ (ಕಾಟ್ಪಾಡಿ ಪ್ಯಾಸೆಂಜರ್) | ಸಂಜೆ 19-45 ಗಂಟೆಗೆ | ಬೆಳಗ್ಗೆ 2-45 ಗಂಟೆಗೆ |



